KA / BG-GPO / 2515 / WPP-47 / 2006-2008




# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ನವೆಂಬರ್ ೧, ೨೦೦೭ (ಕಾರ್ತೀಕ ೧೦, ಶಕ ವರ್ಷ ೧೯೨೯) | ಸಂಚಿಕೆ ೪೩ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ರಾಜ್ಯಾದ್ಯಂತ ಪರಿಶಿಷ್ಟ ಜಾತಿಯ ಕುಟುಂಬಗಳ ಮನೆ ಮನೆ ಸಮೀಕ್ಷೆಗೆ ಅಧಿಕಾರಿ/ಸಿಬ್ಬಂದಿಗಳ ಕರ್ತವ್ಯಗಳನ್ನು ಗೊತ್ತುಪಡಿಸುವ ಹಾಗೂ ನೇಮಿಸುವ ಕುರಿತಾದ ಆದೇಶ.

**ಓದಲಾಗಿದೆ:** ಕಾರ್ಯದರ್ಶಿ, ನ್ಯಾಯಮೂರ್ತಿ ಎ.ಜೆ. ಸದಾಶಿವ ವಿಚಾರಣಾ ಆಯೋಗ ಇವರ ಪತ್ರ ಸಂಖ್ಯೆ: ಕರಾ/ನ್ಯಾಸವಿಆ/ಸಿಆರ್–59/2006–07, ದಿನಾಂಕ 26–4–07.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ನ್ಯಾಯಮೂರ್ತಿ ಎ.ಜೆ. ಸದಾಶಿವ ವಿಚಾರಣಾ ಆಯೋಗ ಇವರು ಸಂವಿಧಾನದಡಿಯಲ್ಲಿ ನೀಡುತ್ತಿರುವ ವಿವಿಧ ಸೌಲಭ್ಯಗಳು ಪರಿಶಿಷ್ಟ ಜಾತಿಯ ಎಲ್ಲಾ ಉಪಜಾತಿಗಳಿಗೆ ಸಮಾನಾಂತರವಾಗಿ ತಲುಪುತ್ತಿವೆಯೇ ಎಂಬುದನ್ನು ನಿಖರವಾಗಿ ತಿಳಿಯುವ ದೃಷ್ಟಿಯಿಂದ ಆಯೋಗವು ಪರಿಶಿಷ್ಟ ಜಾತಿಯ ನೌಕರರ ಸಮೀಕ್ಷೆ ಹಾಗೂ ಪರಿಶಿಷ್ಟ ಜಾತಿಯ ಕುಟುಂಬಗಳ ಮನೆ–ಮನೆ ಸಮೀಕ್ಷಾ ಕಾರ್ಯವನ್ನು ಹಮ್ಮಿಕೊಂಡಿದೆ. ನೌಕರಿಯಲ್ಲಿರುವ ಪರಿಶಿಷ್ಟ ಜಾತಿ ನೌಕರರ ಸಮೀಕ್ಷಾ ಕಾರ್ಯವು ಪ್ರಗತಿಯಲ್ಲಿರುತ್ತದೆ. ಪ್ರಸ್ತುತ ರಾಜ್ಯಾದ್ಯಂತ ಪರಿಶಿಷ್ಟ ಜಾತಿಯ ಕುಟುಂಬಗಳ ಸಮೀಕ್ಷಾ ಕಾರ್ಯವನ್ನು ಪ್ರಾರಂಭಿಸಬೇಕಾಗಿರುತ್ತದೆ. ಈ ಸಮೀಕ್ಷೆಯು ಬೃಹತ್ ಕಾರ್ಯಕ್ರಮವಾಗಿದ್ದು, ಸದರಿ ಸರ್ವೆ ಕಾರ್ಯಕ್ಕೆ ರಾಜ್ಯದಲ್ಲಿರುವ ಎಲ್ಲಾ ಇಲಾಖೆಗಳ ಅಧಿಕಾರಿ/ಸಿಬ್ಬಂದಿಗಳ ಸಹಕಾರ ಅವಶ್ಯಕತೆ ಇದೆ ಗ್ರಾಮೀಣ ಪ್ರದೇಶದ ಸಮೀಕ್ಷಾ ಕಾರ್ಯಕ್ಕೆ ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಜಿಲ್ಲೆಯ ಪ್ರಧಾನ ಸರ್ವೆ ಅಧಿಕಾರಿಗಳಾಗಿ, ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಹೆಚ್ಚುವರಿ ಪ್ರಧಾನ ಸರ್ವೆ ಅಧಿಕಾರಿಗಳಾಗಿ, ಪಟ್ಟಣ ಪ್ರದೇಶಗಳಲ್ಲಿ ಬೃಹತ್ ಬೆಂಗಳೂರು ನಗರಪಾಲಿಕೆ, ನಗರ ಪಾಲಿಕೆಗಳ ಆಯುಕ್ತರು, ಪ್ರಧಾನ ಸರ್ವೆ ಅಧಿಕಾರಿಗಳಾಗಿ, ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯತ್ ಅಧಿಕಾರಿಗಳು, ಸರ್ವೆ ಅಧಿಕಾರಿಗಳಾಗಿ ಹಾಗೂ ಸಿಬ್ಬಂದಿಗಳನ್ನು ಮೇಲ್ವಿಚಾರಕರಾಗಿ. ಗಣತಿದಾರರಾಗಿ ಸದರಿ ಸಮೀಕ್ಷಾ ಕಾರ್ಯವನ್ನು ನಿರ್ವಹಿಸುವ ಜವಾಬ್ದಾರಿಗಳನ್ನು ನಿಗದಿಪಡಿಸಿ ಆದೇಶ ಹೊರಡಿಸಬೇಕೆಂದು ಕೋರಿದ್ದಾರೆ.

ವಿಚಾರಣಾ ಆಯೋಗವು ಉದ್ದೇಶಿಸಿರುವ ಪರಿಶಿಷ್ಟ ಜಾತಿಗಳ ಕುಟುಂಬಗಳ ಮನೆ–ಮನೆ ಸರ್ವೆ ಕಾರ್ಯವನ್ನು ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗವು ನಡೆಸಲು ಉದ್ದೇಶಿಸಿದ ಬೃಹತ್ ಸಮೀಕ್ಷಾ ಕಾರ್ಯದೊಂದಿಗೆ ಸಂಯೋಜಿಸಿ ಕೈಗೊಳ್ಳಲು ನಿರ್ಧರಿಸಲಾಗಿದೆ. ದಿನಾಂಕ 8.3.2007ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸಮೀಕ್ಷಾ ಕಾರ್ಯವನ್ನು 2008ರ ಮಾರ್ಚ್ ಮತ್ತು ಏಪ್ರಿಲ್ ತಿಂಗಳಿನಲ್ಲಿ ನಡೆಸಬಹುದೆಂದು ಅಲ್ಲಿಯವರೆಗೆ ಸಮೀಕ್ಷೆ ನಡೆಸಲು ಪೂರಕವಾದ ಸಿದ್ಧತೆಗಳನ್ನು ಮಾಡಿಕೊಳ್ಳಬಹುದೆಂದು ನಿರ್ಣಯಿಸಲಾಗಿದೆ.

ಸಮೀಕ್ಷಾ ಕಾರ್ಯದಲ್ಲಿ ಅಧಿಕಾರಿ/ಸಿಬ್ಬಂದಿಯವರು ನಿರ್ವಹಿಸಬೇಕಾದ ಕರ್ತವ್ಯ ಹಾಗೂ ಜವಾಬ್ದಾರಿಗಳನ್ನು ಗೊತ್ತುಪಡಿಸಿ ಆದೇಶ ಹೊರಡಿಸಲು ಆಯೋಗದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರಿ ಆದೇಶ ಸಂಖ್ಯೆ: ಸಕಇ 11 ಎಸ್‌ಎಡಿ 2007, ಬೆಂಗಳೂರು, ದಿನಾಂಕ: 23ನೇ ಆಗಸ್ಟ್, 2007

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ನ್ಯಾಯಮೂರ್ತಿ ಎ.ಜೆ. ಸದಾಶಿವ ವಿಚಾರಣಾ ಆಯೋಗವು ಕರ್ನಾಟಕ ರಾಜ್ಯಾದ್ಯಂತ ಪರಿಶಿಷ್ಟ ಜಾತಿಗಳ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳನ್ನು ಅರಿಯಲು ಹಾಗೂ ಸಂವಿಧಾನವು ಪರಿಶಿಷ್ಟ ಜಾತಿಯವರಿಗೆ ನೀಡಿದ ಸೌಲಭ್ಯವನ್ನು ಎಲ್ಲಾ ಉಪಜಾತಿಗಳಿಗೆ ತಲುಪಿವೆಯೇ ಎಂಬ ಮಾಹಿತಿಯನ್ನು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಬೃಹತ್ ಸಮೀಕ್ಷಾ ಕಾರ್ಯದೊಂದಿಗೆ ಸಂಯೋಜಿಸಿ ಸಂಗ್ರಹಿಸಲು 2008ರ ಏಪ್ರಿಲ್‌ನಿಂದ ಸಮೀಕ್ಷಾ ಕಾರ್ಯವನ್ನು ಪ್ರಾರಂಭಿಸಲಿದೆ. ಈ ಸಮೀಕ್ಷಾ ಕಾರ್ಯವನ್ನು ನಡೆಸಲು ನೇಮಿಸಿದ ಅಧಿಕಾರಿ / ಸಿಬ್ಬಂದಿಗಳ ಪದನಾಮವನ್ನು ಈ ಆದೇಶದ ಅನುಬಂಧ–1ರಲ್ಲಿ ಹಾಗೂ ಪದನಾಮೀಕರಿಸಿದ ಅಧಿಕಾರಿ / ಸಿಬ್ಬಂದಿಗಳು ನಿರ್ವಹಿಸಬೇಕಾದ ಕರ್ತವ್ಯ / ಜವಾಬ್ದಾರಿಗಳನ್ನು ಅನುಬಂಧ–2ರಲ್ಲಿ ನಿಗದಿಪಡಿಸಿ ಸರ್ಕಾರವು ಆದೇಶಿಸಿದೆ.

ಸಮೀಕ್ಷಾ ಕಾರ್ಯವನ್ನು ಸಮರ್ಪಕವಾಗಿ ಮತ್ತು ನಿಗದಿತ ಕಾಲಾವಧಿಯಲ್ಲಿ ಪೂರ್ಣಗೊಳಿಸಲು ಅನುವಾಗುವಂತೆ ಆಯೋಗವು ಸಂಬಂಧಪಟ್ಟವರಿಗೆ ಅವಶ್ಯವೆನಿಸಿದಲ್ಲಿ ಸೂಚನೆಗಳನ್ನು ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಎ.ಎಂ. ಚಿದಾನಂದಸ್ವಾಮಿ
ಸರ್ಕಾರದ ಅಧೀನ ಕಾರ್ಯದರ್ಶಿ–2
ಸಮಾಜ ಕಲ್ಯಾಣ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ : ಸಕಇ 11 ಎಸ್‌ಎಡಿ 07, ದಿನಾಂಕ 23-08-2007 ಕ್ಕೆ ಅನುಬಂಧ-1**

**Statement showing officers and field officials of different Departments for Socio-Educational & Economic Survey Work.**

**(A) DISTRICT - RURAL**

| Sl. No. | Officers & field officials of different departments proposed for survey work | To be Designated as |
|---|---|---|
| 1 | 2 | 3 |
| 1 | Deputy Commissioners of the district | Principal Survey Officer |
| 2. | Chief Executive Officers , ZP | Additional Principal Survey Officer |
| 3. | HQA to Deputy Commissioners of the District | District Survey Officers. |
| 4. | DDPI, District Statistical officer,<br>DOBCM & District Social Welfare Officer | Additional District Survey Officers. |
| 5. | Assistant Commissioners of the Revenue Sub-division | Sub-Divisional Survey officer. |
| 6. | Tahasildars of Taluk | Taluk Charge officer |
| 7. | Executive officer of Taluk panchayath, Block Educational officer and Taluk Social Welfare Officer. | Additional Taluk charge officer |
| 8. | Revenue Inspectors, Secretaries of Gram panchayath, High School / Higher Primary school Head Master & officials of other departments | Supervisors (In charge of 6-7 enumerator blocks) |
| 9. | Primary and Higher Primary School teachers, Agricultural assistants, Health visitors, Ashrama and Residential school teachers, wardens / Hostel Superintendents of Social Welfare and Back Ward Classes and Minorities departments and officials of other departments. | Enumerators (in charge of 175-200 households or 750-1000 population) |
| 10. | Resource persons identified and appointed by Tahasildar (to be trained at district level) | Trainer for training the supervisors and Enumerators in at least 2 locations & in two rounds. |
| 11. | Office Superintendent and FDA in the office of the Deputy Commissioners and Tahasildar. | Designated officer for the Socio Educational Economic Survey. |
| 12. | Village Accountant of the Revenue Department | Official I/C of formation of En-blocks each with 200 households or 750-1000 population and preparation of block layout map in his area of Jurisdiction. |

**(B) CMC, TMC and Town Panchayath**

Note : Officers at Si.No. 1 to 5 are also incharge of CMC, TMC, Town panchayath

| | | |
|---|---|---|
| 1 | Commissioners of CMC | Survey Officer for CMC area |
| 2. | Assistant Executive Engineer, Health Officer, Revenue officer or any other officer of CMC | Area Charge officer |
| 3. | Chief officer of TMC & Town Panchayath | Charge Officer. |
| 4. | High school teachers, Head Masters of Higher primary school, Junior Engineer or Health Inspector working in CMC / TMC / TP | Supervisors (in charge of 7 Enumerators block) |
| 5. | Primary and Higher Primary school teachers or any other officials working in equivalent cadre in CMC, TMC & TP | Enumerators (in charge of en-block with 175-200 Households) |
| 6. | Resource persons to be identified and appointed by the commissioner of CMC, Chief officer of TMC / TP and Trained at District level. | Trainers for Training Supervisors and Enumerators |
| 7. | An official working in the cadre of office superintendent in office of the commissioner of CMC | Designated officer in the office of the survey officer for CMC |
| 8. | An official working in the cadre of FDA in the office of chief officer of TMC, TP or Area charge officer of the CMC | Designated officer in the office of the charge officer |
| 9. | Jr. Engineer, Health Inspector, Bill collector of CMC / TMC & TP | Official I/C of formation of En-block & preparation of outline Map (1 official = 8 En-blocks) |

**(C) CITY CORPORATIONS**

| Sl. No | Officers & field officials of different departments proposed for survey work | To be Designated as |
|---|---|---|
| 1 | 2 | 3 |
| 1 | Commissioners of BBMP and Commissioners of other 6 City Corporations | Principal Survey Officers |
| 2. | Joint commissioner / Deputy commissioner of City Corporations or and other Jr. officer next to commissioner of City Corporations | City Survey officer |
| 3. | Deputy commissioner or any other Jr. officer next to Commissioner of City Corporation | Additional City Survey officer |
| 4. | Assistant Executive Engineer, Medical Officer and Assistant Revenue Officer or any other officer working in equivalent cadre | Area Charge officer |
| 5. | Revenue Inspectors, Assistant Engineers, Health inspectors, Head Masters of HPS or any other official working any equivalent cadre | Supervisor |
| 6. | Primary and Higher Primary School Teachers any other official working in equivalent cadre | Enumerators |
| 7. | Resource persons to be identified by the Area charge officers and given training at C.C level | Trainers for training supervisors and Enumerators |
| 8. | An official working in the cadre equivalent to the post of office superintendent and FDA in the city corporations | Designed officer for survey work in the office of the PSO & Area charge officer. |
| 9. | Jr. Engineer, Health Inspector, Bill Collector or any other official appointed by the Commissioner of City Corporation | Official incharge of Formation of En-blocks and preparation of outline map (1 official = 8 En-blocks) |

ಸರ್ಕಾರಿ ಆದೇಶ ಸಂಖ್ಯೆ : ಸಕಇ 11 ಎಸ್ಎಡಿ 07, ದಿನಾಂಕ 23-08-2007 ಕ್ಕೆ ಅನುಬಂಧ - 2

**Area of operation and duties and responsibilities of the various officers and field staff involved in Socio-Economic Survey in Karnataka 2007**

**I. Principal Survey Officers**

**i. Deputy Commissioners of the District**

As Deputy Commissioner of the District he / she will be overall in charge of the entire district covering all Taluks (Rural), City Municipal Councils, Town Municipal Councils and Town Panchayats in case of hilly, terraine malnad / forest areas etc he is authorized to suitably notify the survey related assignments except scheduled dates under intimation to Justice A.J. Sadashiva Inquiry Commission.

His other duties and responsibilities are :

a. Cause the required number of District or Sub-Divisional survey Officers or Charge officers to be appointed for taking survey in the district or municipal corporation or Panchayat area, etc.
b. Take, aid in and supervise the house listing and taking of the survey within the limit of the district or municipal corporation or Panchayat areas, town area committee / notified areas and the like and forward the result alongwith the filled in schedules and blank forms to the Secretary, Justice A.J. Sadashiva Commission of Inquiry within the period specified by him ;
c. Arrange for the training to Enumerators, Supervisors and Charge Officers so as to enable them to perform their duties efficiently and within the time specified by the Justice A.J. Sadashiva Commission of Inquiry ; and

**ii. Commissioners of the City Corporations.**

Commissioner of City Corporation will be overall in charge of the survey work with in the jurisdiction of City Corporation limits.

**II. Addl. Principal Survey Officers.**

The Chief Executive Officers of Zilla Panchayat who are proposed to be appointed as Assistant Principal Survey Officers will be incharge of the Survey that takes place in the entire District excluding City Corporation area. He will be rendering a required administrative and field support to the Principal Survey Officers (Deputy Commissioner of the District) in discharging his responsibilities in making all preparations and conducting the survey as per the guidelines and time schedule given by the Commission.

III. **District / City Corporation Survey Officer :**

i. Head Quarters Assistant to Deputy Commissioner (Rural, City Municipal Council, Town Municipal Council, Town Panchayat)
ii. Joint Commissioner / Deputy Commissioner of the City Corporations (Urban) or any other survey officer

The Head Quarters Assistant to Deputy Commissioner of the District and Joint Commissioner, Deputy Commissioner or any other identified Officer reporting to Principal Survey Officers will assist the principal survey officer and carryout all correspondence, monitor and guide the survey on the day to day basis.

IV. **Additional District / City Survey Officers**

| | | | |
|---|---|---|---|
| i. | Rural/City Municipal Council/ Town Municipal Council/ Town Panchayat | : | Deputy Director for Public Instruction, District Officer for Backward Classes and Minorities, District Social Welfare Officer. |
| ii. | Urban area | : | Deputy Commissioner of City Corporations. |

They may be assisting the City / District survey Officers in conducting the survey. They will be assigned with the task of monitoring and guiding the preparation of the list of Supervisors and Enumerators for appointment, formation of block layout, organizing training, issue of blank schedules to enumerators. Monitoring door-to-door survey in the

Taluk, Wards assigned to them and ensure proper conduct of the survey. They work as a liaison Officer between Principal Survey Officers and Charge officers.

V. **Sub-Divisional Charge Officers**

Assistant Commissioner of respective Sub – Division.

Assistant Commissioners of the respective Sub-Division will be Sub-Division Survey Officer and they will be in charge of survey that takes place with in his administrative jurisdiction.

a. Cause the required number of Charge Officers and other officers in a district or sub-division to be appointed ;
b. Cause the entire area of a district to be divided into well demarcated survey divisions, namely, charges, supervisor's circles and enumerator's blocks as per instruction issued in this behalf by Justice A.J. Sadashiva Commission of Inquiry.
c. Cause the up to date list of villages and towns to be compiled and their jurisdictional maps prepared ;
d. Assist the Justice A.J. Sadashiva Commission of Inquiry in compiling the related statistical data as per his requirement.
e. He will preside over the meeting as Chairman of the Taluk level co-ordination committee and guide and issue instructions as when necessary.
f. Give proper publicity to survey programmes from time to time so as to get proper responses from the public ;
g. Impart training to Charge Officers and cause proper training to be imparted to Supervisors and Enumerators through Charge Officers so as to enable them to perform their duties efficiently and to assist the Principal survey Officers to take, aid in and supervise the houselisting and taking of survey within the limits of the districts, municipal corporations, panchayats etc.
h. Collect the filled-in and blank forms of the various schedules alongwith abstracts or any other statement that may be required to be Panchayat area etc.
i. Consolidate the summary of enumerator's abstract or statement for the entire district;
j. Forward the filled-in or blank forms of each schedule along-with the consolidated summary of enumerator's abstract or statement for district and similar collected abstracts for each Charge Officer or survey officer, through the principal survey Officer to the Justice A.J. Sadashiva Commission of Inquiry.
k. Carry out such other jobs necessary for the successful taking of the survey.

**VI. City Municipal Council survey officer**

**Commissioner of City Municipal Corporation**

As Commissioner of City Municipal Corporation, he is over all in charge of the survey that takes place with in his administrative Jurisdiction. He is required to appoint Supervisors and Enumerators in consultation with the officers of the Education Department. He is responsible for formation of En-blocks. He is required to identify Resource persons and depute them for District level training and then organise the training at convenient locations for supervisors and Enumerators. With all necessary preparation he has to take up door-to-door survey and report to District Principal Survey Officres.

**VII. Area Charge / Taluk Charge Officers**

i. Tahasildars – Taluk (rural)

ii. Assistant Revenue Officers, Assistant Executive Engineer, Health / Medical Officers, Revenue Officers, Deputy Revenue officers, Chief Administrative Officer

iii. Assistant Executive Engineer, Health Officers, Revenue Officer or any other identified officer of City Municipal Council, Town Municipal Council / Town

a. Cause the required number of Supervisors and Enumerators to be appointed within the jurisdiction of his charge ;

a. Cause the required number of Supervisors and Enumerators to be appointed within the jurisdiction of his charge ;
b. Prepare basic documents like general village registers and charge registers as per instructions from the Justice A.J. Sadashiva Commission of Inquiry within the time schedule ;
c. Familiarise himself with the enumeration instructions and cause the supervisors and Enumerators to be trained so as to enable them to perform their duties efficiently ;
d. Ensure that the work goes on according to the time schedule ;
e. Ensure full coverage, accuracy and timeliness in taking survey.
f. Collect the filled-in and blank forms of the various schedules from all the Supervisors in the charge ;
g. He is directly responsible for conducting training to Additional Charge Officers, Supervisors / Enumerators etc.
h. Provide provisional population figures to the Secretary, Justice A.J. Sadashiva Commission of Inquiry within a week on completion of survey work.
i. Consolidate the summary of enumerators abstract of various enumeration blocks and statements and forward these to the District survey officers or Sub-divisional Officers along with the filled in and blank schedules ; and
j. Carry out such other tasks as may be necessary for the successful taking of the survey.

**VIII. Additional Charge / Additional Area Charge Officer**

i. Executive Officer, Taluk Panchayat Samithi, Block Education Officer (Rural)
ii. Officer identified by the Commissioner of City Corporation

Wherever population in the Jurisdiction exceeds 1.00 lakh an Additional Charge Officer will have to be appointed to assist the Tahasildar and Area Charge Officer in City Corporation. Especially to take care of logistic problem in the taluk (Rural) each Additional charge Officer will be put in charge of two Hoblis of that Taluk. Similarly, Additional Area Charge Officers need to be appointed in city Corporation areas where population in the jurisdictional area exceeds 1.00 lakh.

**IX. Supervisors**

Each Supervisor will be in charge for 7 Enumeration blocks each with 200 house holds. He will over see and monitor and guide different tasks assigned to the enumerator and ensures completion of preparation of block layout map, house listing, proper door to door survey and safe delivery of filled in schedules to charge officers. He will also prepare in collaboration with the enumerators few abstract of surveyed data and submit the same to the charge officer.

**X. Enumerators**

a. He will be responsible for filling the survey schedule by conducting house-to-house visit.
b. Prepare block layout map of the allotted enumeration block ;
c. Update the house numbering ;
d. Fill up the various schedules according to instructions issued to him ;
e. Undertake revisional round and updating of records ;
f. Prepare enumerator's abstract which shall consist of the location particulars of the enumeration block along with the total population by various characteristics asked for in the schedules and such other statements he may be required to compile, and
g. Hand over all documents, filled-in and blank schedule to Supervisors.

**XI. Designated Officer**

i. Office Superintendent or person of equivalent cadre.
ii. First Division assistant or person of equivalent cadre.

An official correspondence relating to the survey and related work in their level and to prepare a comparative statement based on surveyed population and 2001 population by taluk / City Corporation etc and bring it before the principal survey

officers of the district and city survey officer. Similarly the designated officers in the office of the charge officers will look after correspondence, preparation of Report statement etc.

**XII.** **Village Accountant / Official in City Corporation, City Municipal Council, Town Panchayat, Town Municipal Council :**

Identification En-blocks comprising of 750-1000 population and fix the boundaries and assist in the preparation of outline map in collaboration with the supervisor. He shall also introduce the location of the households to be surveyed to the enumerator. He will also ensure that no household is left out in the outline map.

**XIII.** Trainers for giving Training to Supervisors and Enumerators.

Officials, who would be resourceful and possessing experience of having given training to enumerators during General Census or Economic Census, need to be identified as " Trainer " and they should be given training at the district level. They are responsible for giving 2 round training in at least 2 locations each with 50-70 Supervisors and Emunerators.

**A.M. CHIDANANDA SWAMY,**
Under Secretary to Government-II,
Social Welfare Department.

ಪಿ.ಆರ್. 1615

**ಒಳಾಡಳಿತ ಸಚಿವಾಲಯ**

**ವಿಷಯ:** ಕ್ರಿಮಿನಲ್ ಪ್ರಕರಣಗಳಲ್ಲಿ ಶಿಕ್ಷೆಗೆ ಒಳಪಡುವಂತಹ ತೀರ್ಮಗಳ ಬಗ್ಗೆ ಮೇಲ್ಮನವಿ / ಪರಿಷ್ಕರಣ ಮನವಿ ಸಲ್ಲಿಸುವ ಕುರಿತು ಹಾಗೂ ಜಾಮೀನು ರದ್ದತಿ ಕುರಿತಂತೆ ಹಾಲಿ ಇರುವ ಆದೇಶ/ಸುತ್ತೋಲೆಗಳನ್ನು ರದ್ದುಪಡಿಸಿ ದಂಡ ಪ್ರಕ್ರಿಯೆ ಸಂಹಿತೆ 1973ರ ತಿದ್ದುಪಡಿ ಅಧಿನಿಯಮ 2005ರ ರೀತ್ಯ ತಿದ್ದುಪಡಿ ಆಗಿರುವ ಕಲಂ 377 ಮತ್ತು 378ಕ್ಕೆ ಅನುಗುಣವಾಗಿ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ. ಹೆಚ್‌ಡಿ 86 ಪಿಪಿಇ 2004, ದಿನಾಂಕ 6.1.2005.
2. ಸರ್ಕಾರದ ಸುತ್ತೋಲೆ ಸಂ. ಒಇ 86 ಪಿಪಿಇ 2004(ಎ), ದಿನಾಂಕ 17.3.2005.
3. ಸರ್ಕಾರದ ಸುತ್ತೋಲೆ ಸಂ. ಒಇ 86 ಪಿಪಿಇ 2004(ಬಿ), ದಿನಾಂಕ 17.3.2005.
4. ಸರ್ಕಾರದ ಸುತ್ತೋಲೆ ಸಂ. ಒಇ 86 ಪಿಪಿಇ 2004(ಸಿ), ದಿನಾಂಕ 17.3.2005.
5. ಸರ್ಕಾರದ ಸುತ್ತೋಲೆ ಸಂ. ಒಇ 86 ಪಿಪಿಇ 2004(ಡಿ), ದಿನಾಂಕ 17.3.2005.
6. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ಎಡಿಎಂ/60/2007–08, ದಿನಾಂಕ 6.8.2007.

**ಪ್ರಸ್ತಾವನೆ:**

ದಂಡ ಪ್ರಕ್ರಿಯಾ ಸಂಹಿತೆ 1973ರ ತಿದ್ದುಪಡಿ ಅಧಿನಿಯಮ 2005ರ ಪ್ರಕಾರ ಪ್ರಕರಣ 377ರಲ್ಲಿ ಶಿಕ್ಷೆಗೆ ಒಳಗಾದ ಮೊಕದ್ದಮೆಗಳಲ್ಲಿ ಸರ್ಕಾರವು ಮೇಲ್ಮನವಿ ಸಲ್ಲಿಸುವ ಬಗ್ಗೆ ಹಾಗೂ ಪ್ರಕರಣ 378ರಲ್ಲಿ ಬಿಡುಗಡೆಯಾದ ಮೊಕದ್ದಮೆಗಳಲ್ಲಿ ಸರ್ಕಾರವು ಮೇಲ್ಮನವಿ ಸಲ್ಲಿಸುವ ಬಗ್ಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 6.1.2005ರ ಸರ್ಕಾರದ ಆದೇಶದಲ್ಲಿ ಮತ್ತು ಮೇಲೆ ಓದಲಾದ (2)ರಿಂದ (4)ರ ಓದಲಾದ ದಿನಾಂಕ 17.3.2005ರ ಸುತ್ತೋಲೆಗಳಲ್ಲಿ ಅಧಿಕಾರಗಳನ್ನು ಪ್ರತ್ಯಾಯೋಜಿಸಲಾಗಿತ್ತು.

ದಂಡ ಪ್ರಕ್ರಿಯಾ ಸಂಹಿತೆ 1973ರ ಕಾನೂನಿಗೆ ತಿದ್ದುಪಡಿಯಾಗಿ ದಿನಾಂಕ 23.6.2006ರಿಂದ ಜಾರಿಗೆ ಬಂದಿರುತ್ತದೆ. ಅದರಂತೆ ದಂಡ ಪ್ರಕ್ರಿಯಾ ಸಂಹಿತೆಯ ಕಲಂ 377ಕ್ಕೆ ತಿದ್ದುಪಡಿಯಾದಂತೆ ಸೆಕ್ಷನ್ಸ್ ನ್ಯಾಯಾಲಯದ ಅಧೀನ ನ್ಯಾಯಾಲಯಗಳಲ್ಲಿ ಆದ ತೀರ್ಪಿನಲ್ಲಿ ಆರೋಪಿಗಳಿಗೆ ಕಡಿಮೆ ಶಿಕ್ಷೆ ವಿಧಿಸಿದ ಪ್ರಕರಣಗಳಲ್ಲಿ ಹೆಚ್ಚಿನ ಶಿಕ್ಷೆಗಾಗಿ ಮೇಲ್ಮನವಿಯ ದೃಢೀಕೃತ ತೀರ್ಪಿನ ಪ್ರತಿಯನ್ನು ಪಡೆದ ಮೂವತ್ತು ದಿನಗಳೊಳಗೆ ಸೆಷನ್ಸ್ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ.

ದಂಡ ಪ್ರಕ್ರಿಯಾ ಸಂಹಿತೆ ಕಲಂ 378ಕ್ಕೂ ತಿದ್ದುಪಡಿ ಆಗಿದ್ದು, ಸೆಷನ್ಸ್ ನ್ಯಾಯಾಲಯದ ಅಧೀನ ನ್ಯಾಯಾಲಯಗಳ ತೀರ್ಪು / ಆದೇಶಗಳ ಪೈಕಿ ಸಂಜ್ಞೆಯ (Cognizable) ಮತ್ತು ಜಾಮೀನಿಯವಲ್ಲದ (Non-bailable) ಪ್ರಕರಣಗಳಲ್ಲಿ ಮೇಲ್ಮನವಿ ಸಲ್ಲಿಸಲು ಸರಹದ್ದಿನ ಸೆಷನ್ಸ್ ನ್ಯಾಯಾಲಯಗಳಿಗೆ ಅಧಿಕಾರ ನೀಡಲಾಗಿದೆ. ಉಳಿದ ಅಧೀನ ನ್ಯಾಯಾಲಯದ ತೀರ್ಪುಗಳ ವಿರುದ್ಧ ಹಾಗೂ ಸೆಷನ್ಸ್ ನ್ಯಾಯಾಲಯದ ತೀರ್ಪು ಮತ್ತು ಆದೇಶದ ವಿರುದ್ಧ ರಾಜ್ಯ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದಾಗಿರುತ್ತದೆ.

ಮೇಲೆ ಓದಲಾದ (6)ರ ದಿನಾಂಕ 6–8–2007ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (1)ರ ಸರ್ಕಾರದ ಆದೇಶ ಹಾಗೂ ಮೇಲೆ ಓದಲಾದ (2) ರಿಂದ (5)ರ ಸುತ್ತೋಲೆಗಳನ್ನು ರದ್ದುಪಡಿಸಿ, ಮೇಲ್ಮನವಿಗೆ ಸಂಬಂಧಪಟ್ಟ ಕಡತಗಳನ್ನು ಜಿಲ್ಲಾಧಿಕಾರಿಯವರಿಗಾಗಲಿ ಅಥವಾ ವಲಯ ಮಟ್ಟದ ಆರಕ್ಷಕ ಮಹಾ ನಿರೀಕ್ಷಕರಿಗಾಗಲೀ ಕಳುಹಿಸುವ ಪದ್ಧತಿಯನ್ನು ರದ್ದುಪಡಿಸಿ, ಈ ಕೆಳಕಂಡಂತೆ ಅಧಿಕಾರವನ್ನು ಪ್ರತ್ಯಾಯೋಜಿಸುವಂತೆ ಕೋರಿರುತ್ತಾರೆ.

1) 7 ವರ್ಷ ಅವಧಿಯವರೆಗಿನ ಅವಧಿಗೆ ಶಿಕ್ಷೆಯನ್ನು ಒಳಗೊಳ್ಳುವ / ವಿಧಿಸಬಹುದಾದಂತಹ ಪ್ರಕರಣಗಳಲ್ಲಿ ಸಂಬಂಧಪಟ್ಟ ಸರಹದ್ದಿನ ವಲಯ ಮಟ್ಟದ ಅಭಿಯೋಗ ಉಪನಿರ್ದೇಶಕರು ನಿರ್ಣಯ ತೆಗೆದುಕೊಳ್ಳುವುದು.
2) 10 ವರ್ಷ ಅವಧಿಯವರೆಗಿನ ಅವಧಿಗೆ ಜೈಲು ಶಿಕ್ಷೆಯನ್ನು ವಿಧಿಸಬಹುದಾದಂತಹ ಪ್ರಕರಣಗಳಲ್ಲಿ ಅಭಿಯೋಗ ನಿರ್ದೇಶಕರು ನಿರ್ಣಯ ತೆಗೆದುಕೊಳ್ಳುವುದು.
3) 10 ವರ್ಷಕ್ಕೂ ಮೀರಿದ ಅವಧಿಗೆ ಜೈಲು ಶಿಕ್ಷೆಯನ್ನು ವಿಧಿಸಬಹುದಾದಂತಹ ಪ್ರಕರಣಗಳಲ್ಲಿ ಸರ್ಕಾರವು ನಿರ್ಣಯ ತೆಗೆದುಕೊಳ್ಳುವುದು.

**ಸರ್ಕಾರಿ ಆದೇಶ ಸಂಖ್ಯೆ: ಒಇ 381 ಪಿಪಿಇ 2007, ಬೆಂಗಳೂರು ದಿನಾಂಕ: 25ನೇ ಸೆಪ್ಟೆಂಬರ್, 2007**

ಸರ್ಕಾರದ ಆದೇಶ ನಂ. ಹೆಚ್‌ಡಿ 86 ಪಿಪಿಇ 2004, ದಿನಾಂಕ 6–1–2005, ಸರ್ಕಾರದ ಸುತ್ತೋಲೆ ನಂ. ಒಇ 86 ಪಿಪಿಇ 2004 (ಎ), ದಿನಾಂಕ 17–3–2005, ಸುತ್ತೋಲೆ ನಂ. ಒಇ 86 ಪಿಪಿಇ 2004 (ಬಿ), ದಿನಾಂಕ 17.3.2005, ಸುತ್ತೋಲೆ ನಂ. ಒಇ 86 ಪಿಪಿಇ 2004 (ಸಿ), ದಿನಾಂಕ 17.3.2005 ಮತ್ತು ಸುತ್ತೋಲೆ ನಂ. ಒಇ 86 ಪಿಪಿಇ 2004 (ಡಿ), ದಿನಾಂಕ 17.3.2005ಗಳನ್ನು ರದ್ದುಪಡಿಸಿ, ಈ ಕೆಳಕಂಡಂತೆ ಅಧಿಕಾರವನ್ನು ಪ್ರತ್ಯಾಯೋಜಿಸಿ ಆದೇಶಿಸಿದೆ.

1) 7 ವರ್ಷ ಅವಧಿಯವರೆಗಿನ ಅವಧಿಗೆ ಶಿಕ್ಷೆಯನ್ನು ಒಳಗೊಳ್ಳುವ / ವಿಧಿಸಬಹುದಾದಂತಹ ಪ್ರಕರಣಗಳಲ್ಲಿ ಸಂಬಂಧಪಟ್ಟ ಸರಹದ್ದಿನ ವಲಯ ಮಟ್ಟದ ಅಭಿಯೋಗ ಉಪನಿರ್ದೇಶಕರು ನಿರ್ಣಯ ತೆಗೆದುಕೊಳ್ಳುವುದು.
2) 10 ವರ್ಷ ಅವಧಿಯವರೆಗಿನ ಅವಧಿಗೆ ಜೈಲು ಶಿಕ್ಷೆಯನ್ನು ವಿಧಿಸಬಹುದಾದಂತಹ ಪ್ರಕರಣಗಳಲ್ಲಿ ಅಭಿಯೋಗ ನಿರ್ದೇಶಕರು ನಿರ್ಣಯ ತೆಗೆದುಕೊಳ್ಳುವುದು.
3) 10 ವರ್ಷಕ್ಕೂ ಮೀರಿದ ಅವಧಿಗೆ ಜೈಲು ಶಿಕ್ಷೆಯನ್ನು ವಿಧಿಸಬಹುದಾದಂತಹ ಪ್ರಕರಣಗಳಲ್ಲಿ ಹಾಗೂ ವಿಶೇಷ ಕಾಯ್ದೆಯ ಪ್ರಕರಣಗಳಲ್ಲಿ ಶಿಕ್ಷೆಯ ಪ್ರಮಾಣ 7 ವರ್ಷಗಳಿಗಿಂತ ಕಡಿಮೆ ಇದ್ದರೂ ಸಹ ಅಂತಹ ಪ್ರಕರಣಗಳಲ್ಲಿ ಸರ್ಕಾರವು ನಿರ್ಣಯ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಲೀಲಾವತಿ**
ಪಿ.ಆರ್. 1750 ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸ ಮತ್ತು ಅಭಿಯೋಗ).

**ವಿಷಯ:** ಶ್ರೀ ಬಿ.ವಿ. ಯಲ್ಲಪ್ಪ ಹಾಲಿ ಎಸ್.ಪಿ (ನಾನ್ ಐ.ಪಿ.ಎಸ್) ರಾಜ್ಯ ಗುಪ್ತವಾರ್ತೆ, ಮೈಸೂರುರವರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬಿ(5) 14/2006–07, ದಿನಾಂಕ 8.5.2007.

**ಪ್ರಸ್ತಾವನೆ:**

ಶ್ರೀ ಬಿ.ವಿ. ಯಲ್ಲಪ್ಪ, ಪೊಲೀಸ್ ಅಧೀಕ್ಷಕರು, ರಾಜ್ಯ ಗುಪ್ತವಾರ್ತೆ, ಮೈಸೂರು ರವರು ಈ ಹಿಂದೆ ಡಿವೈ.ಎಸ್.ಪಿಯಾಗಿ ಗುಲ್ಬರ್ಗಾ ಉಪ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅತೀವ ಕರ್ತವ್ಯಚ್ಯುತಿ, ನಿರ್ಲಕ್ಷತೆ ಮತ್ತು ಅಧಿಕಾರ ದುರುಪಯೋಗಪಡಿಸಿಕೊಂಡಿರುವ ಆರೋಪಕ್ಕಾಗಿ ನಿಮ್ಮ ವಿರುದ್ಧ ಕೆ.ಎಸ್.ಪಿ. (ಡಿ.ಪಿ) ನಿಯಮ 1965/89ರ ನಿಯಮ 6ರ ಅಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರವಲಯ, ಬೆಳಗಾಂ ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿರವರು ಸರ್ಕಾರಕ್ಕೆ ಕೋರಿರುತ್ತಾರೆ. ಹಾಗೂ ಈ ಸಂಬಂಧ ದೋಷಾರೋಪಣೆಯ ದಾಖಲೆಗಳನ್ನು ಒದಗಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 223 ಪೊಸಿಪ 2006, ಬೆಂಗಳೂರು ದಿನಾಂಕ: 24ನೇ ಸೆಪ್ಟೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಬಿ.ವಿ. ಯಲ್ಲಪ್ಪ, ಪೊಲೀಸ್ ಅಧೀಕ್ಷಕರು, ರಾಜ್ಯ ಗುಪ್ತ ವಾರ್ತೆ, ಮೈಸೂರು ಈ ಹಿಂದೆ ಡಿವೈ.ಎಸ್.ಪಿ. ಗುಲ್ಬರ್ಗಾರವರ ವಿರುದ್ಧ ಕೆ.ಎಸ್.ಪಿ. (ಡಿ.ಪಿ) ನಿಯಮ 1965/89ರ ನಿಯಮ 6ರ ಅಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಿದೆ. ಈ ಇಲಾಖಾ ವಿಚಾರಣೆ ನಡೆಸಲು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರವಲಯ, ಬೆಳಗಾಂ ಇವರನ್ನು ವಿಶೇಷ ಅಧಿಕಾರ ಹೊಂದಿದ ಇಲಾಖಾ ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದೆ.

ಈ ಸಂಬಂಧ ದೋಷಾರೋಪಣಾ ಪತ್ರವನ್ನು ಸಹ ಹೊರಡಿಸಲಾಗಿದೆ. ಈ ವಿಚಾರಣೆಯನ್ನು ನಿಯಮಾನುಸಾರ ತನಿಖೆ ನಡೆಸಿ 3 ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿಕೊಡಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಪಿ.ಆರ್. 1753 ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು).

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಡಿ ಶ್ರೀನಿವಾಸಮೂರ್ತಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಚಿಕ್ಕಮಗಳೂರು, ಮೀನುಗಾರಿಕೆ ಇಲಾಖೆ, ಇವರ ವಿರುದ್ಧ ನಡೆಸಲಾದ ಇಲಾಖಾ ವಿಚಾರಣೆಯ ಮೇರೆಗೆ ಅವರಿಗೆ ಕಠಿಣ ದಂಡನೆಯನ್ನು ವಿಧಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು, ಇವರ ಕಾರಣ ಕೇಳಿ ತಿಳುವಳಿಕೆ ಪತ್ರ ಸಂಖ್ಯೆ: ಜಿಪಂಚಿ/ ಅಧಿ/ ವಿವ/ 2001-02 ದಿನಾಂಕ:28.03.2001.

2) ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ/ 180/ ಮೀಇಸೇ/ 97 ದಿನಾಂಕ:15.09.2001.

3) ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ /83/ ಮೀಇಸೇ/ 2002, ದಿನಾಂಕ:01.07.2005.

4) ಸರ್ಕಾರದ 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಪಸಂಮೀ/ 191/ ಮೀಇಸೇ/ 2005 ದಿನಾಂಕ:28.11.2005.

5) ಮೀನುಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ಆಡಳಿತ (2)/ 96/2000-01 ದಿನಾಂಕ:01/06.09.2005 ಮತ್ತು ದಿನಾಂಕ:21.11.2006.

6) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಇವರ ಪತ್ರ ಸಂಖ್ಯೆ: ಪಿಎಸ್‌ಸಿ/ 214/ ಸಿಎನ್‌ಎಸ್/ 2006 ದಿನಾಂಕ:24.03.2007.

**ಪ್ರಸ್ತಾವನೆ:**

ಈ ಪ್ರಕರಣದ ಆಪಾದಿತ ಅಧಿಕಾರಿಯಾದ ಶ್ರೀ ಡಿ. ಶ್ರೀನಿವಾಸಮೂರ್ತಿ, ಪ್ರಸ್ತುತ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಚಿಕ್ಕಮಗಳೂರು, ಇವರು ಹಿಂದೆ 1999 ರಿಂದ 2001ರ ಅವಧಿಯಲ್ಲಿಯೂ ಸಹ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಚಿಕ್ಕಮಗಳೂರು, ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಕರ್ತವ್ಯಲೋಪವೆಸಗಿ ಸರ್ಕಾರಿ ಹಣವನ್ನು ದುರುಪಯೋಗ ಪಡಿಸಿಕೊಂಡ ಆರೋಪಗಳ ಕುರಿತು ಅವರ ವಿರುದ್ಧ ನಡೆಸಲಾದ ಇಲಾಖಾ ವಿಚಾರಣಾ ವರದಿಯ ಆಧಾರದಲ್ಲಿ ಅವರಿಗೆ ಕಠಿಣ ದಂಡನೆಯನ್ನು ವಿಧಿಸುವಂತೆ ಶಿಫಾರಸ್ಸು ಮಾಡಿ ಮೇಲೆ ಕ್ರಮಸಂಖ್ಯೆ (5)ರಲ್ಲಿ ಓದಲಾದ ದಿನಾಂಕ:01/06.09.2005ರ ಪತ್ರದಲ್ಲಿ ಮೀನುಗಾರಿಕೆ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಪ್ರಕರಣದ ಹಿನ್ನೆಲೆ:**

2) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು, ಇವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರನ್ವಯ ಮೇಲೆ ಕ್ರಮಸಂಖ್ಯೆ: (1)ರಲ್ಲಿ ಓದಲಾದ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಜಿಪಂಚಿ/ ಸಿಸಿಎ/ 72/ 2000-01 ದಿನಾಂಕ:28.03.2001ರಲ್ಲಿ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸ್‌ನ್ನು ಸದರಿ ಆಪಾದಿತ ಅಧಿಕಾರಿಯಾದ ಶ್ರೀ ಡಿ. ಶ್ರೀನಿವಾಸಮೂರ್ತಿ, ಪ್ರಸ್ತುತ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಚಿಕ್ಕಮಗಳೂರು, ಇವರಿಗೆ ಜಾರಿಗೊಳಿಸಿ ಈ ಬಗ್ಗೆ ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಿರುತ್ತಾರೆ. ಸದರಿ ಅಧಿಕಾರಿಯ ಮೇಲೆ ಹೊರಿಸಲಾಗಿರುವ 02 ಆರೋಪಗಳು ಸಂಕ್ಷಿಪ್ತವಾಗಿ ಕೆಳಗಿನಂತಿವೆ:

**ಆರೋಪ-1:** "ಸದರಿ ಶ್ರೀ ಡಿ. ಶ್ರೀನಿವಾಸಮೂರ್ತಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಚಿಕ್ಕಮಗಳೂರು, ರವರು ಹಿಂದೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಚಿಕ್ಕಮಗಳೂರು, ಹುದ್ದೆಯಲ್ಲಿ (1999 ರಿಂದ 2001ರ ಅವಧಿಯಲ್ಲಿ) ಕಾರ್ಯನಿರ್ವಹಿಸುತ್ತಿದ್ದಾಗ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1), ಬಂದ್ ಬ್ರೀಡಿಂಗ್, ಬಿ.ಆರ್. ಪ್ರಾಜೆಕ್ಟ್, ಇವರಿಂದ ದಿನಾಂಕ:29.06.1999ರಲ್ಲಿ ಮೀನುಮರಿ ಖರೀದಿಸಿದ ಬಾಬ್ತು ರೂ.26,396-00 ಗಳನ್ನು ಡಿ.ಸಿ.ಬಿಲ್ ಸಂಖ್ಯೆ: 16/ 99-2000ರಂತೆ ದಿನಾಂಕ:03.03.2000 ರಂದು ನಗದೀಕರಿಸಿ ಈ ಮೊತ್ತವನ್ನು ಸಂಬಂಧಿಸಿದವರಿಗೆ ಪಾವತಿಸದೆ ದುರುಪಯೋಗಪಡಿಸಿಕೊಂಡಿರುತ್ತಾರೆ."

**ಆರೋಪ-2:** "ಸದರಿ ಆಪಾದಿತ ಅಧಿಕಾರಿಯು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ಚಿಕ್ಕಮಗಳೂರು, ಹುದ್ದೆಯಲ್ಲಿ 1999 ರಿಂದ 2001ರ ಅವಧಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮೀನುಗಾರರ ಸಹಕಾರ ಸಂಘದವರಿಗೆ ಮೀನುಮರಿ ಸರಬರಾಜು ಮಾಡಿದ ಬಾಬ್ತು ಹಣ, ಮೈಸೂರು ಮಹಾಮಂಡಳಿಯಿಂದ ಮೀನುಮರಿ ಖರೀದಿಸಿ ಖಾಸಗಿಯವರಿಗೆ ಸರಬರಾಜು ಮಾಡಿದ ಬಾಬ್ತು ಹಣ, ಜಲಸಿರಿ ಯೋಜನೆಯಡಿ ನಗದೀಕರಿಸಿದ ಹಣ ಹಾಗೂ ಅಗಸರ ಕಟ್ಟೆ ಮೀನುಮರಿ ಪಾಲನಾ ಕೇಂದ್ರದಿಂದ ಖರೀದಿಸಿದ ಮೀನುಮರಿಗಳ ಬಾಬ್ತು, ಇತ್ಯಾದಿಯಾಗಿ ಒಟ್ಟು ರೂ.90,307-00ಗಳನ್ನು ದುರುಪಯೋಗಪಡಿಸಿಕೊಂಡಿರುತ್ತಾರೆ."

3) ಸದರಿ ಆಪಾದಿತ ಅಧಿಕಾರಿಯು ಮೇಲೆ ಹೇಳಿರುವ ಕಾರಣ ಕೇಳುವ ತಿಳುವಳಿಕೆ ಪತ್ರಕ್ಕೆ ಯಾವ ಹೇಳಿಕೆಯನ್ನು ಸಲ್ಲಿಸದಿರುವುದರಿಂದ, ಅವರ ಮೇಲಿನ ಆರೋಪಗಳ ಸತ್ಯಾಸತ್ಯತೆಯನ್ನು ಇಲಾಖಾ ವಿಚಾರಣೆ ಮೂಲಕ ತಿಳಿಯಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಹಾಗೂ ಶಿಸ್ತು ಪ್ರಾಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು, ಇವರು ತಮ್ಮ ಆದೇಶ

ಸಂಖ್ಯೆ: ಜಿಪಂಚಿ/ ಅ1/ ಸಿಸಿಎ/ 72/ 2000–01 ದಿನಾಂಕ:01.02.2002ರಲ್ಲಿ (ಈ ಹಿಂದೆ ಈ ವಿಚಾರದಲ್ಲಿ ದಿನಾಂಕ:14.09.2001ರ ತಮ್ಮ ಆದೇಶದಲ್ಲಿ ವಿಚಾರಣಾಧಿಕಾರಿಯನ್ನು ಮತ್ತು ಮಂಡನಾಧಿಕಾರಿಯನ್ನು ನೇಮಕ ಮಾಡಿದ್ದ ನೇಮಕಾತಿಯನ್ನು ರದ್ದುಪಡಿಸಿ) ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕಮಗಳೂರು ಇವರನ್ನು "ವಿಚಾರಣಾಧಿಕಾರಿ"ಯನ್ನಾಗಿ ಹಾಗೂ ಅದೇ ಕಛೇರಿಯ ಪತ್ರಾಂಕಿತ ವ್ಯವಸ್ಥಾಪಕರನ್ನು "ಮಂಡನಾಧಿಕಾರಿ"ಯನ್ನಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(2) ಮತ್ತು 5(ಸಿ) ರನ್ವಯ ನೇಮಕ ಮಾಡಿರುತ್ತಾರೆ. ಅದರಂತೆಯೆ, ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆಯನ್ನು ನಡೆಸಿ ವಿಚಾರಣಾ ವರದಿಯನ್ನು ಇಲಾಖಾ ಮುಖ್ಯಸ್ಥರಾದ ಮೀನುಗಾರಿಕೆ ನಿರ್ದೇಶಕರಿಗೆ ಸಲ್ಲಿಸಿರುತ್ತಾರೆ.

4) **ವಿಚಾರಣಾಧಿಕಾರಿಗಳ ವರದಿ ಮತ್ತು ಅಭಿಪ್ರಾಯ:** ಮೇಲೆ ಹೇಳಿರುವಂತೆ ನೇಮಕಗೊಂಡ ವಿಚಾರಣಾಧಿಕಾರಿಗಳು ನಿಯಮಾನುಸಾರ ಈ ಪ್ರಕರಣದ ವಿಚಾರಣೆಯನ್ನು ಕೈಗೊಂಡಿದ್ದು, ವಿಚಾರಣೆಯ ಸಮಯದಲ್ಲಿ ಹಾಜರುಪಡಿಸಲಾದ ದಾಖಲೆಗಳನ್ನು, ಆರೋಪ ಪರ ಸಾಕ್ಷಿಗಳ ಹೇಳಿಕೆಗಳನ್ನು, ಮಂಡನಾಧಿಕಾರಿಗಳ ವಾದವನ್ನು ಮತ್ತು ಆಪಾದಿತ ನೌಕರರ ಹೇಳಿಕೆಯನ್ನು ಇತ್ಯಾದಿ ಪರಿಶೀಲಿಸಿ ಆಪಾದಿತ ಅಧಿಕಾರಿಯ ಮೇಲಿನ ಆರೋಪಗಳ ಬಗ್ಗೆ ಕೆಳಗಿನಂತೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

**ಆರೋಪ 1:** "ಆರೋಪ 1 ರಂತೆ ಸದರಿ ಆಪಾದಿತ ಅಧಿಕಾರಿಯವರು ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–1), ಬಂದ್ ಬ್ರೀಡಿಂಗ್, ಬಿ.ಆರ್.ಪ್ರಾಜೆಕ್ಟ್, ಇವರಿಗೆ ಮೀನುಮರಿ ಸರಬರಾಜು ಬಾಬ್ತು ಪಾವತಿಸಲು ರೂ.26,396–00 ಗಳನ್ನು ದಿನಾಂಕ:03.03.2000ರಂದು ಖಜಾನೆಯಿಂದ ನಗದೀಕರಿಸಿಕೊಂಡಿದ್ದು, ಅದನ್ನು ದಿನಾಂಕ:22.12.2000ರಂದು ಸರ್ಕಾರಕ್ಕೆ ಪಾವತಿಸಿದ್ದು, ಈ ಅವಧಿಗೆ ಅಂದರೆ 09 ತಿಂಗಳ ಅವಧಿಗೆ ಈ ಮೊತ್ತವನ್ನು ತಾತ್ಕಾಲಿಕವಾಗಿ ದುರುಪಯೋಗಪಡಿಸಿಕೊಂಡಿರುತ್ತಾರೆ."

**ಆರೋಪ 2:** "ಈ ಆರೋಪಕ್ಕೆ ಸಂಬಂಧಪಟ್ಟಂತೆ ಸದರಿ ಆಪಾದಿತ ಅಧಿಕಾರಿಯವರು ಒಟ್ಟು ರೂ.77,657–00 ಗಳನ್ನು ದುರುಪಯೋಗಪಡಿಸಿಕೊಂಡಿರುವುದು ವಿಚಾರಣೆಯಲ್ಲಿ ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ತೀರ್ಮಾನಿಸಿರುತ್ತಾರೆ."

5) **ಎರಡನೇ ಕಾರಣ ಕೇಳುವ ತಿಳುವಳಿಕೆ ಪತ್ರ:** ಮೇಲೆ ಹೇಳಿರುವಂತೆ ಆಪಾದಿತ ನೌಕರರ ವಿರುದ್ಧದ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ಅವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8ರಲ್ಲಿ ನಿಗದಿಪಡಿಸಿರುವ ಕಠಿಣ ದಂಡನೆಯನ್ನು ಏಕೆ ವಿಧಿಸಬಾರದೆಂದು ಸಮಜಾಯಿಷಿ ನೀಡುವಂತೆ ಸೂಚಿಸಿ ವಿಚಾರಣಾ ವರದಿಯ ಪ್ರತಿಯೊಂದಿಗೆ ಮೇಲೆ ಕ್ರಮಸಂಖ್ಯೆ: (4)ರಲ್ಲಿ ಓದಲಾದ ದಿನಾಂಕ:28.11.2005ರ ಎರಡನೇ ಕಾರಣ ಕೇಳುವ ನೋಟೀಸನ್ನು ಆಪಾದಿತರಿಗೆ ನೀಡಲಾಗಿದ್ದು, ಮೀನುಗಾರಿಕೆ ನಿರ್ದೇಶಕರು ಇದನ್ನು ದಿನಾಂಕ:29.06.2006ರಂದು ಮೀನುಗಾರಿಕೆ ಉಪ ನಿರ್ದೇಶಕರು, ಶಿವಮೊಗ್ಗ, ಇವರ ಮುಖಾಂತರ ಸದರಿ ಆಪಾದಿತ ಅಧಿಕಾರಿಗೆ ಜಾರಿಗೊಳಿಸಿದ್ದು, ಈ ನೋಟೀಸ್‌ಗೆ ಆಪಾದಿತ ಅಧಿಕಾರಿಯು ಇದುವರೆವಿಗೆ ತಮ್ಮ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲವೆಂದು ಹಾಗೂ ಆಪಾದಿತರ ಮೇಲಿನ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿ ಸೂಕ್ತ ಆದೇಶ ಹೊರಡಿಸುವಂತೆ ಮೀನುಗಾರಿಕೆ ನಿರ್ದೇಶಕರು ಮೇಲೆ ಕ್ರಮಸಂಖ್ಯೆ (5) ರಲ್ಲಿ ಓದಲಾದ ದಿನಾಂಕ:21.11.2006ರ ಪತ್ರದಲ್ಲಿ ಕೋರಿರುತ್ತಾರೆ.

6) **ಮೀನುಗಾರಿಕೆ ನಿರ್ದೇಶಕರ ಅಭಿಪ್ರಾಯ/ ಶಿಫಾರಸ್ಸು:** ಸದರಿ ಆಪಾದಿತ ಅಧಿಕಾರಿಯಾದ ಶ್ರೀ ಡಿ. ಶ್ರೀನಿವಾಸಮೂರ್ತಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಚಿಕ್ಕಮಗಳೂರು ಇವರು ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಳ್ಳುವುದು ಇವರ ಹವ್ಯಾಸವಾಗಿದ್ದು (ಈಗಾಗಲೇ ಸದರಿ ಅಧಿಕಾರಿಯು ಮೇಲೆ ಕ್ರಮಸಂಖ್ಯೆ (2) ಮತ್ತು (3)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಕೆಲವು ಪ್ರಕರಣಗಳಿಗೆ ಸಂಬಂಧಪಟ್ಟಂತೆ ಶಿಸ್ತು ನಿಯಮಗಳಡಿ ದಂಡನೆಗಳಿಗೊಳಗಾಗಿರುತ್ತಾರೆ) ಇವರಿಗೆ ಕಠಿಣ ದಂಡನೆಯನ್ನು ವಿಧಿಸುವಂತೆ ಇಲಾಖಾ ಮುಖ್ಯಸ್ಥರಾದ ಮೀನುಗಾರಿಕೆ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

7) ಮೇಲಿನ ಕಂಡಿಕೆಗಳಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಗಳ ವರದಿಯನ್ನು ಮತ್ತು ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿ ಹಾಗೂ ಇಲಾಖಾ ಮುಖ್ಯಸ್ಥರಾದ ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು, ರವರ ಅಭಿಪ್ರಾಯ ಮತ್ತು ಶಿಫಾರಸ್ಸನ್ನು ಪರಿಗಣಿಸಿ ಸದರಿ ಆಪಾದಿತ ಅಧಿಕಾರಿಯಾದ ಶ್ರೀ ಡಿ. ಶ್ರೀನಿವಾಸಮೂರ್ತಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಚಿಕ್ಕಮಗಳೂರು, ಮೀನುಗಾರಿಕೆ ಇಲಾಖೆ, ಇವರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟದ ಮೊತ್ತ ರೂ.77,657–00 (ರೂಪಾಯಿ ಎಪ್ಪತ್ತೇಳು ಸಾವಿರದ ಆರುನೂರ ಐವತ್ತೇಳು ಮಾತ್ರ) ಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(iv) ರನ್ವಯ ಅವರಿಂದ ವಸೂಲು ಮಾಡಲು ಹಾಗೂ ಸದರಿ ನಿಯಮಗಳ ನಿಯಮ 8(vi) ರನ್ವಯ ಅವರಿಗೆ ಸರ್ಕಾರಿ ಸೇವೆಯಿಂದ "ಕಡ್ಡಾಯ ನಿವೃತ್ತಿ" ಗೊಳಿಸುವ (Compulsory Retirement) ಕಠಿಣ ದಂಡನೆಯನ್ನು ವಿಧಿಸಲು ಸರ್ಕಾರವು/ ಶಿಸ್ತು ಪ್ರಾಧಿಕಾರವು

ತೀರ್ಮಾನಿಸಿ ಈ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದೊಂದಿಗೆ ನಿಯಮಾನುಸಾರ ಸಮಾಲೋಚಿಸಲಾಗಿ, ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು, ಇವರು ಮೇಲೆ ಕ್ರಮಸಂಖ್ಯೆ (6)ರಲ್ಲಿ ಓದಲಾದ ದಿನಾಂಕ:24.03.2007ರ ತಮ್ಮ ಪತ್ರದಲ್ಲಿ ಈ ಪ್ರಕರಣವನ್ನು ಆಯೋಗವು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಡಿ. ಶ್ರೀನಿವಾಸಮೂರ್ತಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2) ಇವರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟದ ಹಣ ರೂ.77,657–00 ಗಳನ್ನು ಶೇ.8ರಂತೆ ಬಡ್ಡಿ ಸಮೇತ ಅವರಿಂದ ವಸೂಲು ಮಾಡಲು ಹಾಗೂ ಅವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(vi) ರನ್ವಯ "ಕಡ್ಡಾಯ ನಿವೃತ್ತಿ" ಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿರುವ ಸರ್ಕಾರದ ಪ್ರಸ್ತಾವನೆಗೆ ಸಹಮತಿಸಿದೆಯೆಂದು ತಿಳಿಸಿರುತ್ತಾರೆ.

8) ಅದರಂತೆಯೇ ಈ ಬಗ್ಗೆ ಸಕಲ ವಲಯಗಳಿಂದ ಕೂಲಂಕಷವಾಗಿ ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ 1ನೇ ಷೆಡ್ಯೂಲ್‌ನ ಕ್ರಮಸಂಖ್ಯೆ:23ರ ಪ್ರಕಾರ ಸಚಿವ ಸಂಪುಟದ ಅನುಮೋದನೆ ಪಡೆದುಕೊಂಡು ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 191 ಮೀಇಸೇ 2005, ಬೆಂಗಳೂರು, ದಿನಾಂಕ:26ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಡಿ. ಶ್ರೀನಿವಾಸಮೂರ್ತಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಚಿಕ್ಕಮಗಳೂರು, ಮೀನುಗಾರಿಕೆ ಇಲಾಖೆ, ಇವರು ಎಸಗಿರುವ ತೀವ್ರತರವಾದ ಕರ್ತವ್ಯಲೋಪ ಮತ್ತು ದುರ್ನಡತೆಗಾಗಿ ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(vi)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸಿ (Compulsorily Retired from Government Service) ಆದೇಶಿಸಿದೆ ಮತ್ತು ಸದರಿ ನಿಯಮಗಳ ನಿಯಮ 8(iv)ರನ್ವಯ ಸದರಿ ಅಧಿಕಾರಿಯಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟದ ಮೊತ್ತ ರೂ.77,657–00ಗಳನ್ನು (ರೂಪಾಯಿ ಎಪ್ಪತ್ತೇಳು ಸಾವಿರದ ಆರುನೂರ ಐವತ್ತೇಳು ಮಾತ್ರ) ಶೇ.8ರಂತೆ ಬಡ್ಡಿ ಸಮೇತ ಅವರ ನಿವೃತ್ತಿ ಸೌಲಭ್ಯಗಳಿಂದ ವಸೂಲಿ ಮಾಡಲು ಆದೇಶಿಸಿದೆ.

ತತ್ಸಂಬಂಧವಾಗಿ ಶ್ರೀ ಡಿ. ಶ್ರೀನಿವಾಸಮೂರ್ತಿ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಚಿಕ್ಕಮಗಳೂರು, ಇವರನ್ನು ತತ್‌ಕ್ಷಣದಿಂದಲೇ ಅವರ ಈಗಿನ ಹುದ್ದೆಯ ಕರ್ತವ್ಯಗಳಿಂದ ಬಿಡುಗಡೆಗೊಳಿಸಲು ಕೂಡಲೇ ಕ್ರಮಕೈಗೊಳ್ಳುವಂತೆ ಹಾಗೂ ಅವರ ಹುದ್ದೆಗೆ ಸೂಕ್ತ ಪ್ರಭಾರ ವ್ಯವಸ್ಥೆಯನ್ನು ಮಾಡುವಂತೆಯೂ ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು, ಮತ್ತು ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಇವರಿಗೆ ನಿರ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ಶೆಟ್ಟಿ**

ಪಿ.ಆರ್.992

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

## ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಸಚಿವಾಲಯ

**ವಿಷಯ:** ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರದಲ್ಲಿ ವಿಶಿಷ್ಟ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳಿಗೆ 'ಕರ್ನಾಟಕ ರಾಜ್ಯ ಪರಿಸರ' ಪ್ರಶಸ್ತಿ ನೀಡಲು ಆಯ್ಕೆ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಅಪಜೀ 20 ಇಎನ್‌ಜಿ 2003, ದಿನಾಂಕ:14.05.2003.
2) ಸರ್ಕಾರದ ಆದೇಶ ಸಂಖ್ಯೆ: ಅಪಜೀ 20 ಇಎನ್‌ಜಿ 2003, ದಿನಾಂಕ:14.05.2003.
3) ಸರ್ಕಾರದ ಆದೇಶ ಸಂಖ್ಯೆ: ಅಪಜೀ 20 ಇಎನ್‌ಜಿ 2003, ದಿನಾಂಕ:10.05.2004.
4) ಸರ್ಕಾರದ ಆದೇಶ ಸಂಖ್ಯೆ: ಅಪಜೀ 27 ಇಎನ್‌ಜಿ 2005 (ಭಾ), ದಿನಾಂಕ:01.06.2005.
5) ಸರ್ಕಾರದ ಆದೇಶ ಸಂಖ್ಯೆ: ಅಪಜೀ 16 ಇಎನ್‌ಜಿ 2006, ದಿನಾಂಕ:29.05.2004.
6) ಪತ್ರಿಕಾ ಪ್ರಕಟಣೆ ದಿನಾಂಕ:26.04.2007.

**ಪ್ರಸ್ತಾವನೆ:**

ರಾಜ್ಯದಲ್ಲಿ ಪರಿಸರ ಕ್ಷೇತ್ರಕ್ಕೆ ಮಹತ್ವ ನೀಡುವ ದೃಷ್ಟಿಯಿಂದ ಪರಿಸರ ಸಂರಕ್ಷಣೆಗಾಗಿ ವಿಶೇಷ ಸೇವೆ ಸಲ್ಲಿಸಿರುವ ವ್ಯಕ್ತಿ/ ಸಂಸ್ಥೆಗಳಿಗೆ ಪರಿಸರ ಪ್ರಶಸ್ತಿಯನ್ನು ಸರ್ಕಾರವು ಪ್ರತಿ ವರ್ಷ ನೀಡುತ್ತಾ ಬಂದಿದೆ. ಅದೇ ರೀತಿ 2007–2008ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಗೆ ಅರ್ಜಿಗಳನ್ನು ಉಲ್ಲೇಖ (6)ರಲ್ಲಿನ ಪತ್ರಿಕಾ ಪ್ರಕಟಣೆಯ ಮೂಲಕ ಆಹ್ವಾನಿಸಲಾಗಿದೆ. ಪರಿಸರ ಸಂರಕ್ಷಣೆಗಾಗಿ ವ್ಯಕ್ತಿ ಮತ್ತು ಸಂಸ್ಥೆಗಳು ಸಲ್ಲಿಸಿರುವ ಸೇವೆಯನ್ನು ಗುರುತಿಸುವುದು ಈ ಪ್ರಶಸ್ತಿಗಳ ಉದ್ದೇಶವಾಗಿದೆ. ಈ ಪ್ರಶಸ್ತಿ ತಲಾ 1.00 ಲಕ್ಷ (ರೂ. ಒಂದು ಲಕ್ಷ ಮಾತ್ರ) ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ. ಕರ್ನಾಟಕ

ರಾಜ್ಯ ಪರಿಸರ ಪ್ರಶಸ್ತಿಯನ್ನು ವ್ಯಕ್ತಿ ಮತ್ತು ಸಂಸ್ಥೆಗಳು (ಸರ್ಕಾರ ವಲಯ, ಸರ್ಕಾರೇತರ ಸಂಸ್ಥೆ, ಕಂಪನಿ, ಟ್ರಸ್ಟುಗಳು ಇತರೆ) (1) ಪರಿಸರ ಸಂರಕ್ಷಣೆ ಮತ್ತು (2) ಪರಿಸರ ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ಆರಂಭಶೀಲತೆ/ ಕೊಡುಗೆಯಲ್ಲಿ ಸಲ್ಲಿಸಿರುವ ಗಣನೀಯ ಸೇವೆಗಾಗಿ ನೀಡಲಾಗುವುದು. ಈ ಪ್ರಶಸ್ತಿಗಳನ್ನು ರಾಜ್ಯದ ಮಲೆನಾಡು, ಕರಾವಳಿ, ಹಳೇ ಮೈಸೂರು, ಹೈದರಾಬಾದ್–ಕರ್ನಾಟಕ, ಮುಂಬೈ–ಕರ್ನಾಟಕ ಮತ್ತು ಬೆಂಗಳೂರು (ನಗರ ಮತ್ತು ಗ್ರಾಮೀಣ ಜಿಲ್ಲೆಗಳು) ಪ್ರದೇಶಗಳಲ್ಲಿ ಅಸಾಧಾರಣ ಸೇವೆ ಸಲ್ಲಿಸಿರುವವರಿಗೆ ಪ್ರಧಾನ ಮಾಡಲಾಗುವುದು. ರಾಜ್ಯದ ಮೇಲೆ ಸೂಚಿಸಲಾದ ಪ್ರದೇಶಗಳಿಗೆ ತಲಾ ಒಂದು ಪ್ರದೇಶಕ್ಕೆ ಎರಡು ಪ್ರಶಸ್ತಿಗಳನ್ನು ಅಂದರೆ ಒಂದನ್ನು ವ್ಯಕ್ತಿಗಳ ವರ್ಗ ಮತ್ತು ಇನ್ನೊಂದನ್ನು ಸಂಸ್ಥೆಗಳ ವರ್ಗದಲ್ಲಿ ನೀಡಲು ಪರಿಶೀಲಿಸಿದೆ. ಸಮಗ್ರವಾಗಿ ರಾಜ್ಯದಲ್ಲಿ ಒಟ್ಟಾರೆ ಹನ್ನೆರಡು ಪ್ರಶಸ್ತಿಗಳನ್ನು ನೀಡಲಾಗುವುದು. ಪರಿಸರ ಪ್ರಶಸ್ತಿಗಾಗಿ ಅರ್ಹರನ್ನು ಆಯ್ಕೆ ಮಾಡುವ ಸಲುವಾಗಿ ಸಮಿತಿಯನ್ನು ರಚಿಸಲು ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರನ್ವಯ ಕೆಳಗಿನಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 16 ಇಎನ್‌ಜಿ 2007 ಬೆಂಗಳೂರು, ದಿನಾಂಕ:31ನೇ ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2007–08ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ ನೀಡಲು, ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ವಿಶಿಷ್ಟ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳ ಅರ್ಹರನ್ನು ಆಯ್ಕೆ ಮಾಡಿ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಈ ಕೆಳಗಿನಂತೆ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ಅಧ್ಯಕ್ಷರು |
| 2. | ಸರ್ಕಾರದ ಕಾರ್ಯದರ್ಶಿ, (ಪರಿಸರ ಮತ್ತು ಜೀವಿಶಾಸ್ತ್ರ) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. | ಸದಸ್ಯರು |
| 3. | ಸರ್ಕಾರದ ಕಾರ್ಯದರ್ಶಿ, (ಅರಣ್ಯ) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. | ಸದಸ್ಯರು |
| 4. | ಡಾ: ಹೆಚ್.ಸಿ. ಶರತ್‌ಚಂದ್ರ, ಅಧ್ಯಕ್ಷರು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ. | ಸದಸ್ಯರು |
| 5. | ಶ್ರೀ ಬಿ.ಕೆ. ಸಿಂಗ್, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕೆರೆ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು. | ಸದಸ್ಯರು |
| 6. | ಡಾ: ಆರ್. ಪ್ರಜಾಪತಿ, ಸದಸ್ಯ ಕಾರ್ಯದರ್ಶಿ, ಕರ್ನಾಟಕ ಜೀವ ವೈವಿಧ್ಯ ಮಂಡಳಿ, ಬೆಂಗಳೂರು. | ಸದಸ್ಯರು |
| 7. | ಡಾ: ಬಿ. ಬಸಪ್ಪ, ಮಹಾ ನಿರ್ದೇಶಕರು, ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನೆ ಸಂಸ್ಥೆ, ಬೆಂಗಳೂರು. | ಸದಸ್ಯರು |
| 8. | ಶ್ರೀ ಪುನಾಟಿ ಶ್ರೀಧರ್, ಹಿರಿಯ ನಿರ್ದೇಶಕರು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. | ಸದಸ್ಯ ಕಾರ್ಯದರ್ಶಿ |

ಸದರಿ ಸಮಿತಿಯ ಕಾರ್ಯ ಅವಧಿಯು ಪ್ರಸಕ್ತ ಸಾಲಿಗೆ ಮಾತ್ರ ಅನ್ವಯಿಸುತ್ತದೆ. ಸಮಿತಿಯ ತನ್ನ ಶಿಫಾರಸ್ಸನ್ನು ದಿನಾಂಕ:02.06.2007 ರೊಳಗೆ ಸರ್ಕಾರಕ್ಕೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಜಗನ್ನಾಥ**

ಪಿ.ಆರ್.1032

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯ ಸಹಾಯಕ ಪ್ರಾಧ್ಯಾಪಕ (ಸ್ವಪ್ರ)ರಾದ ಡಾ: ಟಿ.ಎಸ್. ಸುನೀಲ್ ಕುಮಾರ್ ರವರ ಅನಧಿಕೃತ ಗೈರುಹಾಜರಿಯನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ:05.01.2006 ಸಂಖ್ಯೆ: ಎಸ್.ಆರ್.ಒ(3)/51/ 2006–07ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

2) ದಿನಾಂಕ:22.01.2007 ಸಂಖ್ಯೆ: ಆಕುಕ 06 ಎಂಎಂಸಿ 2007ರ ನೋಟೀಸ್.

3) ದಿನಾಂಕ:02.02.2007 ಸಂಖ್ಯೆ: ವಶ್ರೇಅ (3)/ 51/ 06–07ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

4) ದಿನಾಂಕ:06.02.2007 ಡಾ: ಟಿ.ಎಸ್. ಸುನೀಲ್ ಕುಮಾರ್‌ರವರ ಸಮಜಾಯಿಷಿ.

5) ದಿನಾಂಕ:09.02.2007 ಸಂಖ್ಯೆ: ಎಸ್‌ಆರ್‌ಇ(3)/ 51/ 06–07ರ ವೈದ್ಯಕೀಯ ಶಿಕ್ಷಣ ನಿರ್ದೇಶಕರವರ ಪತ್ರ.

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಸ್ತ್ರಚಿಕಿತ್ಸಾ ಶಾಸ್ತ್ರ ಸಹಾಯಕ ಪ್ರಾಧ್ಯಾಪಕ (ಸ್ವಪ್ರ)ರಾಗಿ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಡಾ: ಟಿ.ಎಸ್. ಸುನೀಲ್‌ಕುಮಾರ್‌ರವರು ದಿನಾಂಕ:10.07.2006ರಿಂದ 06.10.2006ರವರೆಗೆ ಗಳಿಕೆ ರಜೆ ಮಂಜೂರು ಮಾಡಿಸಿಕೊಂಡು ನಂತರ ದಿನಾಂಕ:07.10.2006ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾದ ಸಂಬಂಧ ಅವರಿಗೆ ದೋಷಾರೋಪಣೆಯನ್ನು ಜಾರಿ ಮಾಡಲು ಕೋರಲಾಗಿತ್ತು. ಅದರಂತೆ ಮೇಲೆ (2)ರಲ್ಲಿ ಓದಲಾದ ನೋಟೀಸ್‌ನಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಯ 11ನೇ ನಿಯಮದಡಿ ನೋಟೀಸ್ ನೀಡಲಾಗಿತ್ತು. ಮೇಲೆ (4)ರಲ್ಲಿ ಓದಲಾದ ಸಮಜಾಷಿಯಲ್ಲಿ ಸದರಿ ವೈದ್ಯರು ದಿನಾಂಕ:10.07.2006ರಿಂದ 06.10.2006ರವರೆಗೆ 89 ದಿನಗಳ ಗಳಿಕೆ ರಜೆಯನ್ನು ಗೃಹಕೃತ್ಯದ ನಿಮಿತ್ತ ಬೆಂಗಳೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರಿಂದ ಮಂಜೂರು ಮಾಡಿಸಿಕೊಂಡಿದ್ದು, ಅನಧಿಕೃತ ಗೈರುಹಾಜರಿ ಅವಧಿಯಲ್ಲಿ ಚಿಕನ್ ಗುನ್ಯ ಖಾಯಿಲೆಗೆ ತುತ್ತಾಗಿ ಮತ್ತು ಅವರ ಪತ್ನಿಯು ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿದ್ದು, ಮಕ್ಕಳಿಗೆ ಶಾಲೆಯಲ್ಲಿ ಪ್ರವೇಶ ಸಿಗದೇ ಸಾಂಸಾರಿಕ ತೊಂದರೆಯನ್ನು ಎದುರಿಸಬೇಕಾಯಿತೆಂದು ಇತ್ಯಾದಿ ಕಾರಣಗಳನ್ನು ನೀಡಿ ಅನಧಿಕೃತ ಗೈರುಹಾಜರಿಯನ್ನು ಹಕ್ಕಿನಲ್ಲಿರುವ ರಜೆಯೆಂದು ಪರಿಗಣಿಸುವಂತೆ ಕೋರಿರುತ್ತಾರೆ. ಮೇಲೆ (3) ಮತ್ತು (5)ರಲ್ಲಿ ಓದಲಾದ ಪತ್ರಗಳಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು, ಸದರಿ ವೈದ್ಯರು ಕಾಲಕಾಲಕ್ಕೆ ರಜೆ ಅರ್ಜಿ ಹಾಗೂ ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸಿರುವ ಮೇರೆಗೆ ಅವರು ಕೋರಿರುವ ರಜೆಯನ್ನು ವೈದ್ಯಕೀಯ ಆಧಾರದ ಮೇಲೆ ಮಂಜೂರು ಮಾಡಲು ಹಾಗೂ ಇನ್ನು ಮುಂದೆ ಈ ರೀತಿಯ ಪ್ರಸಂಗಗಳಿಗೆ ಅವಕಾಶ ನೀಡದೇ ಕರ್ತವ್ಯ ನಿರ್ವಹಿಸಲು ಎಚ್ಚರಿಕೆ ನೀಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

2. ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪ್ರಸ್ತಾವನೆಯನ್ನು ಹಾಗೂ ಸದರಿ ವೈದ್ಯರ ಸಮಜಾಯಿಷಿಯನ್ನು ಪರಿಗಣಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 6 ಎಂಎಂಸಿ 2007, ಬೆಂಗಳೂರು, ದಿನಾಂಕ:8ನೇ ಮೇ, 2007**

3. ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಶಸ್ತ್ರ ಚಿಕಿತ್ಸಾ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿರುವ ಡಾ: ಟಿ.ಎಸ್. ಸುನೀಲ್ ಕುಮಾರ್ ರವರ ದಿನಾಂಕ:07.10.2006 ರಿಂದ 07.01.2007 ರವರೆಗಿನ 93 ದಿವಸಗಳ ಅನಧಿಕೃತ ಗೈರು ಹಾಜರಿಯನ್ನು ಅವರ ಹಕ್ಕಿನಲ್ಲಿರುವ ರಜೆ ಎಂದು ಪರಿಗಣಿಸಿ ಆದೇಶಿಸಿದೆ.

4. ಸದರಿ ವೈದ್ಯರು ಅವರ ಸೇವಾ ಅವಧಿಯಲ್ಲಿ ಇನ್ನು ಮುಂದೆ ಈ ರೀತಿಯ ಪ್ರಸಂಗಗಳಿಗೆ ಅವಕಾಶ ನೀಡಬಾರದೆಂದು ಎಚ್ಚರಿಕೆ ನೀಡಲಾಗಿದೆ ಮತ್ತು ಅವರ ವಿರುದ್ಧ ಇದ್ದ ಆರೋಪಗಳನ್ನು ಮತ್ತು ನಡೆಸಲು ಉದ್ದೇಶಿಸಿದ್ದ ಶಿಸ್ತು ಕ್ರಮವನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಾಜ್ ಅಹಮದ್ ಷರೀಫ್**

ಸರ್ಕಾರದ ಜಂಟಿ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್.1033

**HEALTH AND FAMILY WELFARE SECRETARIAT**

**Sub:** Handing over of District Hospitals to Government Medical Colleges.

**Preamble:**

Government of Karnataka has established Six Medical Colleges in the State at Hassan, Mandya, Belgaum, Shimoga, Raichur and Bidar vide Government Order No.HFW 516 MPS 2004 Dated:22.01.2005. While the Colleges at Hassan, Mandya and Belgaum have started functioning from the last academic year (2006-07), the other three Medical Colleges at Shimoga, Raichur and Bidar are likely to start from the current academic year (2007-08) after receipt of approval from the Ministry of Health and Family Welfare, Government of India on recommendation of the Medical Council of India.

2. Under the regulations of the Medical Council of India "Minimum Standard Requirements for a Medical College- For 100 Admissions Annually Regulations, 1999" under the head "Teaching Hospitals

1-General remarks-1. 1(1) All the teaching hospitals shall be under the Academic, Administrative and Disciplinary control of the Dean/ Principal of the Medical College.

3. Accordingly a proposal was sent to the Department of Health and Family Welfare to hand over the District Hospitals at Hassan, Mandya, Belgaum, Shimoga, Raichur and Bidar. The Department of Health and Family Welfare issued the following order vide G.O. No. HFW 672 CJM 2006, Dated:29.12.2006.

"ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಮತ್ತು ಮಂಗಳೂರಿನಲ್ಲಿರುವ ಜಿಲ್ಲಾ ಆಸ್ಪತ್ರೆಗಳಲ್ಲಿರುವ ವ್ಯವಸ್ಥೆಯಂತೆ ಮಂಡ್ಯ, ಹಾಸನ, ಶಿವಮೊಗ್ಗ, ರಾಯಚೂರು, ಬೀದರ್ ಮತ್ತು ಬೆಳಗಾವಿ ಜಿಲ್ಲಾ ಆಸ್ಪತ್ರೆಗಳಲ್ಲಿ ಟೀಚಿಂಗ್ ವಿಭಾಗದ ನಿಯಂತ್ರಣವನ್ನು ಮಾತ್ರ ಸರ್ಕಾರಿ ವೈದ್ಯಕೀಯ ಮಹಾವಿದ್ಯಾಲಯಗಳು ಹೊಂದಲು ಹಾಗೂ ಈ ಆಸ್ಪತ್ರೆಗಳಲ್ಲಿನ ಕ್ಲಿನಿಕಲ್ ಮತ್ತು ಆಡಳಿತಾತ್ಮಕ ವಿಭಾಗಗಳ ನಿಯಂತ್ರಣವನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿಯೇ ಮುಂದುವರೆಸಲು ಸರ್ಕಾರ ಮಂಜೂರಾತಿ ನೀಡಿದೆ."

4. This order of the Department of Health and Family Welfare Department does not satisfy the inspection team of the Medical Council of India nor does this meet the regulations of the Medical Council of India. The inspection teams of the Medical Council of India have already inspected the Medical Colleges at the above said places in the month of May 2007 and have pointed out this deficiency.

5. Inview of the above this matter was placed before the Cabinet for a considered decision. The Cabinet at its meeting held on 4th June 2007 has approved the proposal of the Medical Education Department to hand over these Six District Hospitals to the Government Medical Colleges. Hence. this order.

**Government Order No. HFW 397 MPS 2006 (P), Bangalore, Dated:11th June, 2007**

Government of Karnataka is pleased to order the transfer of the District Hospitals from the Department of Health and Family Welfare to the Medical Colleges at Hassan. Mandya, Belgaum, Shimoga, Raichur and Bidar under the control of the Department of Medical Education, with immediate effect along with the infrastructure, buildings, equipments, staff, budget etc., Henceforth, all these District Hospitals shall be called as teaching hospitals under the academic, administrative and disciplinary control of the Director/ Dean/ Principal of these Medical Colleges.

By Order and in the name of the Governor of Karnataka,

**MAAZ AHMED SHARIFF**

PR-1104

Joint Secretary to Government,

Health & Family Welfare Department, (Medical Education).

**ಜಲಸಂಪನ್ಮೂಲ ಸಚಿವಾಲಯ**

**ವಿಷಯ:** ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಸಖರಾಯಪಟ್ಟಣ ಗ್ರಾಮಕ್ಕೆ ಅಯ್ಯನ ಕೆರೆಯಿಂದ ಕುಡಿಯುವ ನೀರು ಪೂರೈಸುವ ಕುರಿತು.

**ಓದಲಾಗಿದೆ:** ದಿನಾಂಕ:12.03.2007ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರದ ಸಂಖ್ಯೆ: ಮುಇಂ: ಸನೀ(ದ): ನೀ.ಶಾಖೆ: ಅಯ್ಯನಕೆರೆ ಕುಡಿಯುವ ನೀರು: 2006–07/ 1202.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:12.03.2007ರ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಸಖರಾಯಪಟ್ಟಣಕ್ಕೆ ಕುಡಿಯುವ ನೀರು ಸರಬರಾಜಿಗಾಗಿ ಸದರಿ ತಾಲ್ಲೂಕಿನ ಅಯ್ಯನಕೆರೆಯಿಂದ ನೀರನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡುವ ಬಗ್ಗೆ ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಕಡೂರು ತಾಲ್ಲೂಕು ಸಖರಾಯಪಟ್ಟಣ ಅತಿ ದೊಡ್ಡ ಗ್ರಾಮವಾಗಿದ್ದು ಅಂತರ್ಜಲದ ಏರಿಳಿತದಿಂದಾಗಿ ಈ ಗ್ರಾಮಕ್ಕೆ ಸುವ್ಯವಸ್ಥಿತ ನೀರು ಸರಬರಾಜು ಮಾಡಲು ಸಾಧ್ಯವಾಗುತ್ತಿಲ್ಲವಾದ ಕಾರಣ, ಈ ಗ್ರಾಮಕ್ಕೆ ಸಣ್ಣ ನೀರಾವರಿ ವ್ಯಾಪ್ತಿಯಲ್ಲಿ ಬರುವ

ಅಯ್ಯನಕೆರೆಯಿಂದ ಶಾಶ್ವತ ಕುಡಿಯುವ ನೀರಿನ ವ್ಯವಸ್ಥೆ ಮಾಡುವ ಕಾರ್ಯವನ್ನು ರಾಜೀವ್ ಗಾಂಧಿ ರಾಷ್ಟ್ರೀಯ ಕುಡಿಯುವ ನೀರು ಸರಬರಾಜು ಯೋಜನೆಯಡಿಯಲ್ಲಿ ಚಿಕ್ಕಮಗಳೂರಿನ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗವು ಯೋಜನೆ ಹಮ್ಮಿಕೊಂಡಿದೆ. ಈ ಯೋಜನೆಯಡಿಯಲ್ಲಿ ಅಯ್ಯನಕೆರೆಯಿಂದ 0.522 ಎಂ.ಸಿ.ಎಫ್.ಟಿ. ಅಥವಾ 0.0148 ದಶಲಕ್ಷ ಘನಮೀಟರ್ ಉಪಯೋಗಿಸಿಕೊಳ್ಳಲು ಜಿಲ್ಲಾ ಪಂಚಾಯತ್ ಇಂಜಿನಿಯರ್ ವಿಭಾಗವು ಸಣ್ಣ ನೀರಾವರಿ ಇಲಾಖೆಯ ಅನುಮತಿಯನ್ನು ಕೋರಿರುತ್ತದೆ. ಕುಡಿಯುವ ನೀರಿಗಾಗಿ ಉಪಯೋಗಿಸಿಕೊಳ್ಳಲು ಕೇಳಿರುವ ನೀರಿನ ಪರಿಮಾಣವು ಜಲಾಶಯದ ಒಟ್ಟು ಶೇಕರಣಾ ಸಾಮರ್ಥ್ಯಕ್ಕೆ ಹೋಲಿಸಿದಾಗ ಶೇ.0.13ರಷ್ಟು ಮಾತ್ರ ಆಗಿರುತ್ತದೆ. ಹಿಂದಿನ ಅಂಕಿ ಅಂಶಗಳನ್ನು ನೋಡಿದಾಗ ಜಲಾಶಯದಲ್ಲಿ ಬಹುತೇಕ ವರ್ಷಗಳಲ್ಲಿ ನೀರು ತುಂಬಿರುತ್ತದೆ.

ರಾಷ್ಟ್ರೀಯ ಹಾಗೂ ರಾಜ್ಯ ಜಲನೀತಿಗಳಲ್ಲಿ ಕುಡಿಯುವ ನೀರಿನ ಬಳಕೆಗೆ ಪ್ರಥಮ ಆದ್ಯತೆ ನೀಡಬೇಕಾಗಿರುವುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಲವು ನಿಬಂಧನೆಗಳಿಗೆ ಒಳಪಡಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 56 ಮಸಾವಿ 2007, ಬೆಂಗಳೂರು, ದಿನಾಂಕ:ನೇ ಜೂನ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು ಸಖರಾಯಪಟ್ಟಣ ಗ್ರಾಮದಲ್ಲಿ ಕುಡಿಯುವ ನೀರಿನ ಬಳಕೆಗಾಗಿ ಕಡೂರು ತಾಲ್ಲೂಕು ಅಯ್ಯನಕೆರೆಯಿಂದ 0.522 ಎಂ.ಸಿ.ಎಫ್.ಟಿ. ಅಥವಾ 0.0148 ದಶಲಕ್ಷ ಘನಮೀಟರ್ ನೀರನ್ನು ಬಳಸಿಕೊಳ್ಳಲು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಸರ್ಕಾರವು ಅನುಮತಿ ನೀಡಿದೆ:

1. ಕೆರೆಯಲ್ಲಿ ಕನಿಷ್ಟ ಮಟ್ಟದವರೆಗೆ ನೀರು ಶೇಖರಣೆಯಾಗುವವರೆಗೂ ಕೆರೆಯಿಂದ ನೀರನ್ನು ಬಳಸಬಾರದು.

2. ಕೆರೆಯ ನೀರನ್ನು ಕೃಷಿಗೆ ಹಾಗೂ ಕುಡಿಯುವ ನೀರಿನ ಉಪಯೋಗಕ್ಕಾಗಿ ಜಂಟಿಯಾಗಿ ಬಳಸಿಕೊಳ್ಳಲು ಪ್ರಸ್ತಾವನೆಯನ್ನು ನೀರಾವರಿ ಸಲಹಾ ಸಮಿತಿಯ ಮುಂದೆ ಮಂಡಿಸಿ ಅದರ ಅನುಮೋದನೆ ಪಡೆಯಬೇಕು.

3. ಕೆರೆಯ ನೀರು ಬಳಕೆದಾರರ ಸಂಘದಿಂದ ಸೂಕ್ತ ಅನುಮತಿ ಪಡೆಯುವುದು.

4. ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಅಯ್ಯನ ಕೆರೆಯಿಂದ ಕುಡಿಯುವ ನೀರಿಗೆ ಉಪಯೋಗಿಸಿಕೊಳ್ಳುವ ನೀರಿನ ಪ್ರಮಾಣವನ್ನು ವಾರ್ಷಿಕ 0.522 ಎಂ.ಸಿ.ಎಫ್.ಟಿ. ಅಥವಾ 0.0148 ದಶಲಕ್ಷ ಘನಮೀಟರ್‌ಗೆ ಸೀಮಿತಗೊಳಿಸಬೇಕು. ಈ ಪರಿಮಾಣದ ನೀರನ್ನು ಪಡೆಯಲು ಜಲಾಶಯದ ಹತ್ತಿರ ಒಂದು ಮಾಪಕವನ್ನು ಅಳವಡಿಸಿ ಕಾಲಕಾಲಕ್ಕೆ ನೀರಿನ ಪ್ರಮಾಣವನ್ನು ಅಳತೆ ಮಾಡುವುದು ಹಾಗೂ ಇದನ್ನು ಸಣ್ಣ ನೀರಾವರಿ ಇಲಾಖೆಯ ಅಧಿಕಾರಿಗಳು ಪರಿವೀಕ್ಷಿಸಲು ಅವಕಾಶ ನೀಡುವುದು ಕುಡಿಯುವ ನೀರಿಗೆ ಉಪಯೋಗಿಸಲ್ಪಡುವ ನೀರಿನ ಪರಿಮಾಣವನ್ನು ಒಂದು ರಿಜಿಸ್ಟರ್‌ನಲ್ಲಿ ದಾಖಲಿಸುವುದು ಹಾಗೂ ಇದನ್ನು ಸಣ್ಣ ನೀರಾವರಿ ಇಲಾಖೆಯ ಅಧಿಕಾರಿಗಳು ಕಾಲಕಾಲಕ್ಕೆ ಪರಿಶೀಲಿಸಿ ಮೇಲು ಸಹಿ ಮಾಡುವುದು.

5. ನೀರು ಸರಬರಾಜು ಯೋಜನೆಯ ನೀಲಿ ನಕಾಶೆಯನ್ನು ಪಡೆದು ಸಣ್ಣ ನೀರಾವರಿ ಇಲಾಖೆಯಲ್ಲಿ ದಾಖಲಿಸುವುದು.

6. ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಚಿಕ್ಕಮಗಳೂರು ಇವರು ಕುಡಿಯುವ ನೀರಿನ ಪೂರೈಕೆಗಾಗಿ ಕೈಗೊಳ್ಳುವ ಯಾವುದೇ ಕಾಮಗಾರಿಯಿಂದ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಅಯ್ಯನ ಕೆರೆಗೆ ಯಾವುದೇ ಹಾನಿ ಉಂಟಾಗಬಾರದು ಹಾಗೂ ಒಂದು ವೇಳೆ ಯಾವುದೇ ಹಾನಿ ಉಂಟಾದಲ್ಲಿ ಅದಕ್ಕೆ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಚಿಕ್ಕಮಗಳೂರು ಇದು ಹೊಣೆಯಾಗಿರುತ್ತದೆ. ಇದರ ವ್ಯಾಪ್ತಿಯಲ್ಲಿ ಕೈಗೊಳ್ಳುವ ಕಾಮಗಾರಿಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರಿಂದ ಪೂರ್ವಭಾವಿಯಾಗಿ ತೀರುವಳಿ ಪಡೆಯತಕ್ಕದ್ದು.

7. ಮೇಲೆ ತಿಳಿಸಿರುವ ಎಲ್ಲಾ ನಿಬಂಧನೆಗಳನ್ನೊಳಗೊಂಡ ಒಂದು ತಿಳುವಳಿಕೆ ಪತ್ರವನ್ನು ತಯಾರಿಸಿ ಅದಕ್ಕೆ ಸಂಬಂಧಪಟ್ಟ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಚಿಕ್ಕಮಗಳೂರು ಅಧಿಕಾರಿಗಳು ಹಾಗೂ ಸಣ್ಣ ನೀರಾವರಿ ಕಾರ್ಯಪಾಲಕ ಇಂಜಿನಿಯರ್ ಜಂಟಿಯಾಗಿ ಸಹಿ ಮಾಡಿ ಅದರ ಮೂಲ ಪ್ರತಿಯನ್ನು ಸಣ್ಣ ನೀರಾವರಿ ಇಲಾಖೆಯಲ್ಲಿ ದಾಖಲಿಸುವುದು.

8. ಕೆರೆಯ ವಾರ್ಷಿಕ ನಿರ್ವಹಣೆಗೆ ತಗಲುವ 25% ವೆಚ್ಚವನ್ನು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗವು ಭರಿಸಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್.1161

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಶ್ರೀ ಎಸ್.ಎಸ್. ಮದನಿ ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ) ಶ್ರೀ ಅಬೀದ್ ಹುಸೇನ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ) ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 46 ಸೇಇವಿ 2005, ಬೆಂಗಳೂರು, ದಿನಾಂಕ:18ನೇ ಮೇ, 2007**

ಶ್ರೀ ಎಸ್.ಎಸ್. ಮದನಿ, ಕಾರ್ಯಪಾಲಕ ಅಭಿಯಂತರರು, (ನಿವೃತ್ತ) ಮತ್ತು ಶ್ರೀ ಅಬೀದ್ ಹುಸೇನ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ) ಇವರುಗಳು ಸಣ್ಣ ನೀರಾವರಿ ವಿಭಾಗ ಕುಷ್ಟಗಿ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ ನೀಡಶೇಸಿ, ಗ್ರಾಮದ ಬಳಿ ಹೊಸಕೆರೆ ನಿರ್ಮಾಣ ಅಂದಾಜುವೆಚ್ಚ ರೂ.10.38 ಲಕ್ಷಗಳಿಗೆ 1995–96ರಲ್ಲಿ ತಾಂತ್ರಿಕ ಹಾಗೂ ಆಡಳಿತಾತ್ಮಕ ಮಂಜೂರಾತಿ ಪಡೆದು 7 ವರ್ಷಗಳಾದರು ಪೂರ್ಣಗೊಳಿಸದೇ ಕರ್ತವ್ಯ ಲೋಪವೆಸಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದ ಮೇಲ್ಕಂಡ ದುರ್ನಡತೆಗಳಿಗಾಗಿ ಶ್ರೀ ಎಸ್.ಎಸ್. ಮದನಿ, ಕಾರ್ಯಪಾಲಕ ಅಭಿಯಂತರರು, (ನಿವೃತ್ತ) ಮತ್ತು ಶ್ರೀ ಅಬೀದ ಹುಸೇನ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ) ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲು ಸರ್ಕಾರವು ತೀರ್ಮಾನಿಸಿದೆ.

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್.ಎಸ್. ಮದನಿ, ಕಾರ್ಯಪಾಲಕ ಅಭಿಯಂತರರು, (ನಿವೃತ್ತ) ಮತ್ತು ಶ್ರೀ ಅಬೀದ ಹುಸೇನ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ) ಇವರುಗಳ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11, 11ಎ ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್.1162

ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಹಾಸನ ಜಿಲ್ಲೆಯ ಹೊಳೆನರಸೀಪುರ ತಾಲ್ಲೂಕಿನ ಜಿಲ್ಲಾ ಮುಖ್ಯ ರಸ್ತೆಯನ್ನು ರಾಜ್ಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ರವರ ಪತ್ರ ಸಂಖ್ಯೆ: ಮುಇಂ: ಲೋಇ: ಹಾವೃಹಾ: ಎಇ: ಹೊನಪುರ: ಕಾ.ಪಟ್ಟಿ: 2007–08, ದಿನಾಂಕ:13.06.2007.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಹಾಸನ ಜಿಲ್ಲೆಯ ಹೊಳೆನರಸೀಪುರ ತಾಲ್ಲೂಕಿನ ಈ ಕೆಳಕಂಡ ಜಿಲ್ಲಾ ಮುಖ್ಯ ರಸ್ತೆಯನ್ನು ರಾಜ್ಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಗೆ ಅನುಮೋದನೆಯನ್ನು ಕೋರಿದ್ದಾರೆ.

| ಕ್ರಮ ಸಂಖ್ಯೆ | ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ವಿವರ | ಉದ್ದ ಕಿಮೀ |
|---|---|---|
| 1. | ಬಿ.ಟಿ. ರಸ್ತೆಯಿಂದ ಕೋಡಿಹಳ್ಳಿ ಸೇರುವ ರಸ್ತೆ ಮಾರ್ಗ ಕ್ಯಾತನಹಳ್ಳಿ–ಹರದನಹಳ್ಳಿ–ಶಿಗರನಹಳ್ಳಿ–ಹರಿಹರಪುರ–ದೊಡ್ಡಕುಂಚೇವು ರಸ್ತೆ. | 17.20 |

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 316 ಸಿಆರ್ಎಂ 2007, ಬೆಂಗಳೂರು, ದಿನಾಂಕ:14/15ನೇ ಜೂನ್, 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಹಾಸನ ಜಿಲ್ಲೆಯ ಹೊಳೆನರಸೀಪುರ ತಾಲ್ಲೂಕಿನಲ್ಲಿ ಬರುವ ಈ ಕೆಳಕಂಡ ಜಿಲ್ಲಾ ಮುಖ್ಯ ರಸ್ತೆಯನ್ನು ರಾಜ್ಯ ಹೆದ್ದಾರಿಯೆಂದು ನಾಮಕರಣ ಮಾಡಿ ಘೋಷಿಸಿದೆ.

| ಕ್ರಮ ಸಂಖ್ಯೆ | ರಾಜ್ಯ ಹೆದ್ದಾರಿ ಸಂಖ್ಯೆ | ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ವಿವರ | ಉದ್ದ ಕಿಮೀ |
|---|---|---|---|
| 1. | 121 | ಬಿ.ಟಿ. ರಸ್ತೆಯಿಂದ ಕೋಡಿಹಳ್ಳಿ ಸೇರುವ ರಸ್ತೆ ಮಾರ್ಗ ಕ್ಯಾತನಹಳ್ಳಿ–ಹರದನಹಳ್ಳಿ–ಶಿಗರನಹಳ್ಳಿ–ಹರಿಹರಪುರ–ದೊಡ್ಡಕುಂಚೇವು ರಸ್ತೆ. | 17.20 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್.1116

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ).